॥ ಶ್ರೀ ಪಂಚಾಕ್ಷರಿ ಪ್ರಸನ್ನಃ ॥

ಎಸ್. ಶೇಷಾದ್ರಿ (ಚಿಂತ್ರಪಳ್ಳಿ) ಕೃತ.

# ಸೂಳೆ ಯಾರು?

ನೀತಿಯುಕ್ತ ಸಾಮಾಜಿಕ ನಾಟಕ.





1990 ... ಬೆಲೆ ರೂ. 10-00




ಪ್ರಕಾಶಕರು :

ಪಂಚಾಕ್ಷರಿ ಪ್ರಕಾಶನ.

ಹಗರಿಬೊಮ್ಮನಹಳ್ಳಿ.

# ಮುನ್ನುಡಿ....

**ಶ್ರೀ ಶೇಷಾದ್ರಿಯವರು** ಬಳ್ಳಾರಿ ಜಿಲ್ಲೆಯಲ್ಲಿಯೇ ಸುಪರಿಚಿತರು. ಒಳ್ಳೆ ಸ್ವಭಾವ. ಯಾವಾಗಲೂ ನಗುತ್ತಾ ಎಲ್ಲರೂ ತಮ್ಮವರು ಎಂಬ ಅಭಿಮಾನ ಉಳ್ಳವರು. ಪರೋಪಕಾರಿ ಜೀವಿ. ಇಷ್ಟು ಅವರ ವೈಯಕ್ತಿಕ ಜೀವನದ ಪರಿಚಯ. ಸಣ್ಣ ವಯಸ್ಸಿನಲ್ಲಿದ್ದಾಗಿನಿಂದ ಇವರಿಗೆ ನಾಟಕದಗೀಳು ಅದಕ್ಕಾಗಿ 'ವೀರೇಶ್ವರ ಆಶ್ರಮ' ಗದಗ ಸೇರಿ, ಸತತವಾಗಿ ಹಾರ್ಮೋನಿಯಂ ಅಭ್ಯಾಸಮಾಡಿ ಈಗ ಬಳ್ಳಾರಿ ಜಿಲ್ಲೆಯಲ್ಲದೆ ಇನ್ನು ಕೆಲವು ಜಿಲ್ಲೆಗಳಲ್ಲಿ ಸತತವಾಗಿ ನಾಟಕ ರಂಗದಲ್ಲಿ ಸೇವೆ ಸಲ್ಲಿಸಿ ಈಗ ನಾಟಕದ ರಚನೆಗೂ ಕೈ ಹಾಕಿ ಯಶಸ್ವಿಯಾಗಿದ್ದಾರೆ. ಓದಿದ್ದು 4 ನೇ ತರಗತಿಯಾದರೂ ನಾಟಕ-ಗಳನ್ನು ಓದಿ, ಕವಿಗಳ ಸ್ನೇಹ, ಕವಿಗಳ ಜೊತೆ ಚರ್ಚೆ, ನಾಟಕಗಳನ್ನು ನೋಡಿ, ಕಲಿತು, ಅನುಭವದಿಂದ ದೊರಕಿದ ಅಮೃತದಿಂದ ನಾಟಕ ರಚಿಸಲು ಮುಂದಾಗಿದ್ದಾರೆ. ನಾಟಕಗಳು ಯಶಸ್ವಿಯಾಗಿವೆ. ಈಗ **ಸೂಳೆ ಯಾರು?** ನಾಟಕ ಮುದ್ರಣವಾಗುತ್ತಿರುವುದು ತುಂಬಾ ಸಂತೋಷದ ಸಂಗತಿ. ಇವರ ಪ್ರಯತ್ನ ಸಾಧನೆ, ಇವರ ಗುರುಗಳಾದ **ಶ್ರೀ ಪುಟ್ಟರಾಜ ಗವಾಯಿಗಳ** ಆಶೀರ್ವಾದವೆಂದರೆ ತಪ್ಪಾಗಲಾರದೆಂದು ನನ್ನ ಅಭಿಪ್ರಾಯ. ಗುರುಗಳ ಪ್ರತಿಭಿಯನ್ನೆ ಬೆಳಗಿಸಲು ಹೊರಟಿರುವ **ಶ್ರೀ ಶೇಷಾದ್ರಿ** ಇವರು ತಮ್ಮ ಗುರುಗಳಂತೆ ಕರ್ನಾಟಕದ ಮೂಲೆ ಮೂಲೆಗಳಲ್ಲಿ ಸಾಹಿತ್ಯ ಸಂಗೀತದ ಡಿಂಡಿಮ ಬಾರಿಸಲೆಂದು ಹಾರೈಸುತ್ತೇನೆ.

ಇನ್ನು ನಾಟಕದ ವಿಷಯವಾಗಿ ಹೇಳಬೇಕೆಂದರೆ, **ಸೂಳೆ ಯಾರು?** ನಾಟಕದ ಹೆಸರು ಪ್ರಶ್ನೆಯಾಗಿಯೇ ಉಳಿದಿದೆ. ಪ್ರಶ್ನಾರ್ಥವಾಗಿರುವ ಈ ನಾಟಕ ಕೊನೆಯವರೆಗೆ ಪ್ರಶ್ನೆಯಾಗಿಯೇ ಉಳಿಯುತ್ತದೆ.

ಶ್ರೀಯುತರ ಅಭಿಪ್ರಾಯದಂತೆ, ಸೂಳೆಯರು ಎಂದು ಪ್ರತ್ಯೇಕ ಗುಂಪೊಂದೇನೂ ಇರಲಿಲ್ಲ. ಸತಿಯರೊಳಗಿಂದಲೇ ಕೆಲವು ಮಂದಿ ಸೂಳೆಯರಾದರು. ಅದು ಹೇಗೆಂದರೆ.... ಒಬ್ಬ ಆಂಗ್ಲ ಕವಿ ಈ ರೀತಿ ಹೇಳಿದ್ದಾನೆ. *"By Birth all girls are good, but from where these bad girls are coming?"* ಇದೂ ಪ್ರಶ್ನೆಯಲ್ಲವೆ ? ಕನ್ನಡದಲ್ಲಿ ಹೇಳಬೇಕೆಂದರೆ, ಹೆಣ್ಣು ಪವಿತ್ರವಾಗಿಯೇ ಹುಟ್ಟುತ್ತದೆ ಪವಿತ್ರವಾಗಿಯೇ ಬೆಳೆಯುತ್ತದೆ. ಆದರೆ.. ಈ ಸೂಳೆಯರು ಎಲ್ಲಿಂದ ಬಂದರು? ಇದು ಪ್ರಶ್ನೆ. ಹಾಗಾದರೇ.... ಸೂಳೆಯರೇ ಇರಲಿಲ್ಲವೇ? ಇಲ್ಲ. ಸತಿಯರಲ್ಲೆ ಕೆಲವರು ಸೂಳೆಯರಾಗಿ, ಸೂಳೆಯರ ವಂಶ ಬೆಳೆದುಬಂತು. ಸತಿಯಾದವಳು ಅನಿಮಿಷಗಳಿಗೆ ಬಲಿಯಾಗಿ ಗಂಡನನ್ನು ಅಲಕ್ಷಿಸಿ ಸೂಳೆಯಾದಳು. ಇನ್ನು ಕೆಲವರು ತಮ್ಮ ಆಶೆ ಅಕಾಂಕ್ಷೆಗಳನ್ನು ಗಂಡ ತೀರಿಸದೇ ಹೋದಾಗ, ಅದಕ್ಕಾಗಿ ಸೂಳೆಯರಾದರು. ಇನ್ನೂ ಕೆಲವರು ನಿಕೃಷ್ಟಕ ನೀಚರಾದಂಥ ಕೆಲ ಹೆಂಗಳೆಯರು ತಮ್ಮ ಕಾಮ ತೃಷೆಗಳನ್ನು ತೀರಿಸಿಕೊಳ್ಳಲು ಗಂಡ, ಮತ್ತು ಮಕ್ಕಳನ್ನು ಕೊಲ್ಲುವಂಥ ನೀಚತನಕ್ಕಿಳಿದು ಸೂಳೆಯರಾದರು. ಕಾರಣ ಸತಿ ಯಾರು ? ಸೂಳೆ ಯಾರು ? ಎಂದು ಕಂಡು ಹಿಡಿಯುವ ಪ್ರಸಂಗವನ್ನು ಎದುರಿಸುವ ಪ್ರಸಂಗ ಇಂದಿನ ಸಮಾಜದ ಮುಂದೆ ಇದೆ. ಇದನ್ನೇ ಶ್ರೀಯುತರು ಓದುಗರು ಮತ್ತು ಕಲಾ ಪ್ರೋತ್ಸಾಹಕರ ಮುಂದೆ ಇಟ್ಟಿದ್ದಾರೆ. ಇದನ್ನು ಓದಿ, ಅಭಿನಯಿಸಿ ಆನಂದಿಸಿದರೆ ಕಲಾವಿದನ ಜೀವನ ಸಾರ್ಥಕ. ಬರಹಗಾರನ ಬವಣೆ ತಪ್ಪಿದಂತೆ. ಇದಕ್ಕೂ ಮುಂಚೆ ಇವರ ನಾಟಕ ಕೊಂಡು ಓದಿದರೆ ನಾಟಕಕಾರನ ಜೀವನ ಸಾರ್ಥಕ.

ಇತಿ ಕಲಾರಾಧಕ,

**ವಾದಿರಾಜ**

**ಕಂಪ್ಲಿ – 583 132.**

# ನನ್ನ ನುಡಿ........

ಇದು ನನ್ನ ಎರಡನೇ ಕೃತಿಯಾದರು ಅಚ್ಚಾಗುತ್ತಿರುವ ಮೊದಲನೇ ಕೃತಿ ಈ ನಾಟಕವನ್ನು ಆಶೀರ್ವದಿಸಿದ **ಪೂಜ್ಯ ಶ್ರೀ ಚರಂತಯ್ಯ ಸ್ವಾಮಿಗಳು** ನಂದಿಪುರ ಇವರಿಗೆ ನನ್ನ ಶಿರಸ್ಸಾಷ್ಟಾಂಗಗಳು.

ಈ ನಾಟಕ ಪ್ರಕಟಣೆಗೆ ತನು, ಮನ,ಧನಗಳಿಂದ ನನಗೆ ಸಕಲ ಸಹಕಾರ ವನ್ನು ನೀಡಿದ ಕೆ. ಬಿ. ದೇವಣ್ಣ. ಜಿ. ಮುರಳಿಧರ. ಫಿ. ಲಕ್ಷ್ಮಿನಾರಾಯಣ ರೆಡ್ಡಿ, ಮುತ್ತು ರಿಗ್ ಸರ್ವಿಸ್‌ನ ಮಾಲಿಕರಾದ ಆರ್. ಕಂದಸ್ವಾಮಿ, ಕೆ. ಸಿ. ಪಲ್ಲೈ ಮುತ್ತು, ಆರ್. ತಂಗವೇಲೂ, ಎಸ್. ಮುತ್ತು ಸ್ವಾಮಿ, ಮಲಸ ಮಣಿ. ಪಿ. ಸುಬ್ರಮಣ್ಯಂ ಎಂ. ಎಸ್. ಜಬಿ (ಭರಮಸಾಗರ) ಇವರಿಗೆ ನಾನು ಯಾವತ್ತೂ ಋಣಿ.

ನನಗೆ ಯಾವತ್ತೂ ಪ್ರೋತ್ಸಾಹ ನೀಡುವ ಹಗರಿಬೊಮ್ಮನಹಳ್ಳಿಯ ಹಿರಿಯರಾದ ಎಂ.ಪಿ. ಪ್ರತಾಪ್‌ಗೌಡ್ರು, ಜಿ. ಮಂಜುನಾಥ, ಜಿ. ವಿಜಯ್ ಸಿ. ಹೆಚ್. ಶಂಕರ್‌ಗೌಡ, ಎಸ್. ಗುರುಬಸಪ್ಪ, ಎಂ.ಪಿ. ಬಾಪೂಜಿ. ಜಿ. ವೆಂಕಣ್ಣ, ಜಿ.ವಿ. ಪೆಂಡಕೂರು, ಕೆ. ವಿರುಪಾಕ್ಷಗೌಡ, ನಾ. ಹನುಮಂತ ಶೆಟ್ಟಿ. ಡಾ॥ ಎಂ.ಜಿ. ಕುಲಕರ್ಣಿ, ಹಾಲ್ದಾಳ್ ಕೊಟ್ರಪ್ಪ, ಯು.ಕೆ. ಸುರೇಶ ಬಳ್ಳಾರಿ ಸಂಗಪ್ಪಶೆಟ್ಟಿ, ಎಂ.ವಿ. ಪಂಚಾಕ್ಷರಯ್ಯ. ಎಂ. ಕಾಶಿವಿಶ್ವನಾಥ್ ಜಿ, ಯೋಗಾನಂದ, ಪ್ರಾಣೇಶ ಇವರಿಗೆಲ್ಲಾ ನನ್ನ ನಮನಗಳು.

ನನ್ನ ಕಲಾ ಮಿತ್ರರಾದ ಎ. ವಿರುಪಾಕ್ಷರಾವ್, ವಿಕ್ರಂ, ಗೆದ್ದೆಪ್ಪ ವಿರೇಶ್ ಮಂಗಳೂರು, ಟಿ. ರಾಜು, ಎಸ್. ದ್ವಾರಕೀಶ್. ಎಸ್. ಎಂ. ಕೊಟ್ರಯ್ಯ, ಸರ್ವೇರ ಸಕ್ರೆಗೌಡ್ರು ಪಿ. ಗೋವಿಂದ್, ಟಿ. ಬಾಪು, ಹೆಚ್. ಮಹಾಬಲೇಶ್ವರ. ನರಸಿಂಹ ಆಚಾರ್, ಜಿ.ಮೈಲಾರಪ್ಪ, ಹೆಚ್. ನಾಗರಾಜ ಅಲ್ಲದೆ ಕಲಾವಿದೆಯರಾದ ಮನ್ಸೂರು ಸುಭದ್ರಮ್ಮ, ಕೆ. ನಾಗರತ್ನ, ಎಸ್. ರೇಣುಕ, ಎ. ರೇಣುಕ. ಕಾಶೀಬಾಯಿ, ಪ್ರೇಮ, ಸಾವಿತ್ರಿ, ರತ್ನ ಭಾಗ್ಯಶ್ರೀ ಇವರಿಗೆ ನನ್ನ ಅಭಿನಂದನೆಗಳು.

ಈ ನಾಟಕವನ್ನು ಅಂದವಾಗಿ ಮುದ್ರಿಸಿ ಕೊಟ್ಟ ಜ್ಯೋತಿ ಮುದ್ರಣದ ಸಿಬ್ಬಂದಿಯವರಿಗೂ ನನ್ನ ಪುಸ್ತಕ ಬಿಡುಗಡೆಗೆ ಸಹಕಾರ ನೀಡಿದ ಜ್ಯೋತಿ ವೃಂದದವರಿಗೂ ಹಾಗೂ ನನ್ನ ಎಲ್ಲಾ ಅಭಿಮಾನಿ ಓದುಗರಿಗೂ ನನ್ನ ಕೃತಜ್ಞತೆಗಳು.

ತಮ್ಮವನೇ ಆದ,

**ಎಸ್. ಶೇಷಾದ್ರಿ**

# ಅರ್ಪಣೆ.



ಈ ನನ್ನ ಕೃತಿಯನ್ನು **ಪರಮ ಪೂಜ್ಯ ಶ್ರೀ ಪಂಡಿತ ಪಂಚಾಕ್ಷರಿ ಗವಾಯಿಗಳು ಹಾಗೂ ಶ್ರೀ ಶ್ರೀ ಪುಟ್ಟರಾಜ ಗವಾಯಿಗಳ** ಪಾದಾರವಿಂದಗಳಿಗೆ ಅರ್ಪಿಸುತ್ತಿದ್ದೇನೆ.

---

## ನಾಂದಿ

ರಾಗ ಭೂಪ :

ಇಳಿದು ಬಾ ಗಾನಯೋಗಿ ಶಿವ ಸ್ವರೂಪಿ ನಾದ ಭ್ರಹ್ಮಾಕರ ॥
ಸಪ್ತಸ್ವರ ಸಾಗರ ಮಹಿಮ ನಾಮ ಆಗರ,
ಧರೆಗಿಳಿದು ಬೆಳಗಿಸು ಬಾ ಕರುಣಾಕರ S S S S ॥ ಇಳಿದು ಬಾ ॥

ರಾಗ : ಮಾಲಕೌಂಸು

ಅಂಧರಿಗೆ ಜ್ಞಾನ ನಿಧಿಯೆ ಗದುಗಿನ ಗಂಧರ್ವ
ವಿಶ್ವ ತುಂಬಿ ಬೆಳಗುತಿದೆ ಸಂಗೀತ ಪರ್ವ
ಧರೆಗಿಳಿದು ಬೆಳಗಿಸು ಬಾ ಪಂಚಾಕ್ಷರ S S S S ॥ ಇಳಿದು ಬಾ ॥

ರಾಗ ಸಾರಂಗ :

ಅಣು ಅಣುವಲಿ ಮೊಳಗುತಿದೆ ಶ್ರೀ ಗುರು ಪಂಚಾಕ್ಷರ
ನಿನ್ನ ನಾಮ ಎಲ್ಲರಲ್ಲಿ ಜೈ ಜೈಕಾರ,
ಧರೆಗಿಳಿದು ಬೆಳಗಿಸು ಬಾ ಪಂಚಾಕ್ಷರ ॥ ॥ಇಳಿದು ಬಾ॥

## .... ಪಾತ್ರ ಪರಿಚಯ ....

ರವಿಚಂದ್ರ – ಕಥಾನಾಯಕ. ಡಾಕ್ಟರ್.

ಸೂರ್ಯಚಂದ್ರ – ರವಿಚಂದ್ರನ ಸ್ನೇಹಿತ, ಸಾತ್ವಿಕ.

ವಿಶ್ವಚಂದ್ರ – ರವಿಚಂದ್ರನ ಮಿತ್ರ, ಖಳನಾಯಕ.

ದಲಾಲಿ ಧರ್ಮಣ್ಣ – ಕೆಂಪಿಯ ಅಣ್ಣ, ಹಾಸ್ಯ.

ದಾನ – ಕೆಂಪಿಯ ಪ್ರಿಯಕರ, ಹಾಸ್ಯ.

ಪ್ರತಾಪ್‌ಸಿಂಗ್
ಧರೋಡೆಸಿಂಗ್ } ಧರೋಡೆಕೋರರ ವೇಷ ಧರಿಸಿದ ಸಿ.ಐ.ಡಿ. ಗಳು

ಪೋಲೀಸ್ – ಹಾಸ್ಯ.

ಉಮಾಚಂದ್ರ – ರವಿಚಂದ್ರನ ಮಗ ವಯಸ್ಸು 10 ವರ್ಷ.

ಕಾಂಚನ – ರವಿಚಂದ್ರನ ಹೆಂಡತಿ, ವಿಶ್ವಚಂದ್ರನ ಪ್ರೇಯಸಿ.

ಅರ್ಚನ – ಸೂರ್ಯಚಂದ್ರನ ಕೈಹಿಡಿದ ಸೂಳೆ.

ಕೆಂಪಿ – ಧರ್ಮಣ್ಣನ ತಂಗಿ, ದಾನನ ಪ್ರೇಯಸಿ.

ಸುಧಾ – ರವಿಚಂದ್ರನ ಮಗಳು 8 ವರ್ಷ

---

**ಸೂಚನೆ :** ಈ ನಾಟಕವನ್ನು ಪ್ರದರ್ಶಿಸುವ ಕಲಾ ಸಂಘಗಳು ಕವಿ ಕಾಣಿಕೆ ರೂ. 50/- ಸಲ್ಲಿಸಿ ಲಿಖಿತ ಒಪ್ಪಿಗೆ ಪಡೆಯಬೇಕು.

ತಮ್ಮ,
**ಎಸ್. ಶೇಷಾದ್ರಿ ಚಿಂತ್ರಪಳ್ಳಿ**
ಪೋಸ್ಟ್ : ಹಗರಿಬೊಮ್ಮನಹಳ್ಳಿ–583212.
ಜಿಲ್ಲೆ ಬಳ್ಳಾರಿ.

## ಪ್ರವೇಶ ೧ [ಮನೆ ಪ್ಲಾಟು]

[ ಡಾ॥ ರವಿಚಂದ್ರ ಅವನ ಹೆಂಡತಿ ಮತ್ತು ಇಬ್ಬರು ಮಕ್ಕಳೊಡನೆ ಆನಂದದಿಂದ ಹಾಡುತ್ತ ನಲಿಯುತ್ತಿರುವರು ]

— ಹಾಡು —

ಜೋಡಿ – ಆನಂದಾ........ನಮಗೆ ಆನಂದ
ಮನೆಗೆ ಮಕ್ಕಳು ಚಂದ
ಅವು ನಕ್ಕರೆ ನಮಗೆ ಆನಂದ....ಆನಂದಾ.... ॥೧॥

ಗಂಡು – ಮಂದಹಾಸವು ಮುಖಕೆ ಚಂದವಾಗಿರುದಯ್ಯ
ಮಾನಸಾರೆ ಮೆಚ್ಚಿರುವೆ ನಿನ್ನ ನಯನವಕಂಡು

ಜೋಡಿ – ಆನಂದಾ........

ಹೆಣ್ಣು – ಅಂದ ಚಂದವು ನಮಗೆ ಸ್ಥಿರವಾಗಿರಲಯ್ಯ
ಮಮತೆಯ ಕಂದಗಳು ನಲಿಯುತ ಬಳಿಯಿರಲು

ಜೋಡಿ – ಆನಂದ.

**ರವಿಚಂದ್ರ** – ಕಾಂಚನಾ ಮಕ್ಕಳಿದ್ದ ಮನೆಚಂದವೆಂಬ ಮಾತು ಸುಳ್ಳಲ್ಲ ನೋಡು. [ ಅದನ್ನು ಆ ದೇವರಲ್ಲಿ ಪಡೆದು ಬಂದಿರಬೇಕು ] ಇವರಡು ಮಕ್ಕಳಿಂದ ನಮ್ಮ ಬಾಳಿನಲ್ಲಿ ಆನಂದವಿದೆ ಇವರಡು ಮಕ್ಕಳು ನಮ್ಮ ಬಾಳಕಣ್ಣು, ಎಷ್ಟುಐಶ್ವರ್ಯವಿದ್ದರೇನು? ಮಕ್ಕಳಿಲ್ಲದ ಮನೆ ಸ್ಮಶಾನವಿದ್ದಂತೆ.

**ಕಾಂಚನ** – ನಿಜ ನೋಡಿ ನಿಮ್ಮ ಮಾತು. ಮಕ್ಕಳ ಭಾಗ್ಯ ಕಂಡವರಿಗೆ ಸಿಗುವುದಿಲ್ಲ. ಅದನ್ನು ಆ ದೇವರಲ್ಲಿ ಪಡೆದು ಬಂದಿರಬೇಕು. ಎಷ್ಟೋ ಜನರು ಮಕ್ಕಳಿಗಾಗಿ ಹಂಬಲಿಸಿ ಕೊರಗಿ ಕೊರಗಿ ಸಣ್ಣಾಗಿದ್ದಾರೆ

ಆದರೆ ಆ ದೇವರು ನಮ್ಮ ಬಾಳ ಮಂದಿರಕ್ಕೆ ನಂದಾದೀಪವಾಗಲೆಂದು ಈ ಎರುಡು ಮುತ್ತುಗಳನ್ನು ಕರುಣಿಸಿದ್ದಾನೆ. ನಾನು ಆ ದೇವರಿಗೆ ಎಷ್ಟು ಕೃತಜ್ಞತೆಗಳನ್ನು ಅರ್ಪಿಸಿದರು ಕಡಿಮೆಯೇ. [ಒಳಗಿನಿಂದ ಉಮಾಚಂದ್ರ ಸುಧಾ ಪಾಟಿಚೀಲ ಹಾಕಿಕೊಂಡು ಬರುವರು]

**ಉಮಾಚಂದ್ರ** – ಅಪ್ಪಾಜಿ, ಶಾಲೆಗೆ ವೇಳೆಯಾಗಿದೆ. ನಾವು ಶಾಲೆಗೆ ಹೋಗುತ್ತೇವೆ.

**ರವಿಚಂದ್ರ** – ನೋಡು ಉಮಾಚಂದ್ರ ನೀನು ಚೆನ್ನಾಗಿ ಅಭ್ಯಾಸ ಮಾಡಬೇಕು, ಒಳ್ಳೆಯ ವಿದ್ಯಾವಂತನಾಗಿ ನನಗಿಂತ ದೊಡ್ಡ ಡಾಕ್ಟರ್ ಅಗಬೇಕು.

**ಸುಧಾ** – ಅಪ್ಪಾಜಿ. ಅಣ್ಣ ಡಾಕ್ಟರ್‌ಆದರೆ ಮತ್ತೆ ನಾನೇನಾಗ-ಬೇಕು !

**ಕಾಂಚನ** – ನೋಡು ಮಗು ನೀನು ಚನ್ನಾಗಿ ಓದಿ ಗಂಡನ ಮನೆಗೆ ಹೋಗಬೇಕು.

**ಸುಧಾ** – ಅಪ್ಪಾಜಿ ಗಂಡನ ಮನೆ ಅಂದರೇನು ? ಅದು ಒಂದು ಕೆಲಸನಾ ?

**ರವಿಚಂದ್ರ** – ಹೌದಮ್ಮಾ! ಅದೊಂದು ದೊಡ್ಡ ಕೆಲಸ. ಈಗ ನಿಮ್ಮಮ್ಮ ಮಾಡುತ್ತಾ ಇದ್ದಾಳಲ್ಲ ಇದೇ ಕೆಲಸ,

**ಸುಧಾ** – ಏನು ? ಅಡಿಗೆ ಕೆಲಸನಾ ?

**ಉಮಾಚಂದ್ರ** – ಉಂ ಕಣೆ, ನಿನಗೆ ಅದೇ ಕೆಲಸ.

**ಸುಧಾ** – ಉಂ. ಉಂ. ಆ ಕೆಲಸಾದರೆ ನಾನೊಲ್ಲೆ.

**ಉಮಾಚಂದ್ರ** – ಇರ್ಲಿ ಬಾರೆ ಸುಧಾ ಶಾಲೆಗೆ ಹೊತ್ತಾಯ್ತು ಹೋಗೋಣ. ಅಪ್ಪಾಜಿ ಟಾ, ಟಾ....

**ಸುಧಾ** – ಅಮ್ಮಾ ಟಾ, ಟಾ.... ಅಪ್ಪಾಜಿ ಟಾ, ಟಾ....

ರವಿಚಂದ್ರ } ಟಾ, ಟಾ.... [ಆನಂದದಿಂದ ನಗುವರು]
ಕಾಂಚನ }

**ರವಿಚಂದ್ರ** – ನೋಡಿದಿಯೇನೆ ಕಾಂಚನ! ನನ್ನ ಮಗ ಎಷ್ಟು ಜಾಣನಿದ್ದಾನೆ. ತನ್ನ ತಂಗಿಯನ್ನು ಶಾಲೆಗೆ ಹೇಗೆ ಕರೆದುಕೊಂಡು ಹೋಗುತ್ತಾನೆ ನೋಡು!

**ಕಾಂಚನ** – ಹೌದು ಅಂದ್ರೆ! ನೀವು ಅಂದಂತೆ ಅವನು ದೊಡ್ಡ ಡಾಕ್ಟರ್ ಆಗುತ್ತಾನೆ ಅಲ್ಲಾ, ಮಕ್ಕಳ ಆಟದಲ್ಲಿ ಮೈಮರೆತು ಆಸ್ಪತ್ರೆಗೆ ರಜ ಹಾಕಿರುವಿರೋ ಹೇಗೊ?

**ರವಿಚಂದ್ರ** – ಕಾಂಚನ! ಮಕ್ಕಳ ಆನಂದದಲ್ಲಿ ಆಸ್ಪತ್ರೆಯನ್ನೇ ಮರೆತುಬಿಟ್ಟಿದ್ದೇನೆ. ಹಾ, ವೇಳೆಯಾಯಿತು ನಾನಿನ್ನು ಬರಲೆ [ಗಂಡನಿಗೆ ಕೋಟು ಭೂಟು ತೊಡಿಸುವಳು]

**ಕಾಂಚನ** – ಹೋಗಿ ಬನ್ನಿ!

**ರವಿಚಂದ್ರ** – ಸಾಕು ಬಿಡೆ ನನ್ನನ್ನು ಶೃಂಗರಿಸುವುದೇ ನಿನ್ನ ನಿತ್ಯದ ಕೆಲಸವಾಯಿತಲ್ಲ. ಆ ನಾನಿನ್ನು ಬರಲೇ? [ಕಾಂಚನಳ ಕೆನ್ನೆ ತಟ್ಟಿ ಹೋಗುವನು. ಕಾಂಚನ ಹೋಗುವಳು]

## ಪ್ರವೇಶ ೨ [ರಸ್ತಾ]

[ದಲಾಲಿ ಧರ್ಮಣ್ಣ ಕೋಟು ಪೇಟ ಸುತ್ತಿಕೊಂಡು ಹೆಗಲಮೇಲೆ ಟವಲ್ ಹಾಕಿಕೊಂಡು ಬರುವನು]

**ಧರ್ಮಣ್ಣ** – ಛೆ, ಛೆ, ಛೆ, ಸಾಕಾಗಿ ಹೋಯ್ತುರಿ ಈ ದಲಾಲಿ ಕೆಲಸ ಒಂದು ಸಂತಿನಾ, ಎರಡು ಸಂತಿನಾ, ವಾರದಾಗ ನಾಲ್ಕು ಸಂತಿ, ತಿರುಗಿ ತಿರುಗಿ ಈ ದನಗಳ ದಲಾಲಿ ಮಾಡಕ ಹತ್ತಿ ಕಾಲಾಗಿನ ನರಗಳೆಲ್ಲ ನಿಕ್ಕಳ

ಬಿದ್ದಿದವ್ರಿ. ಈ ದನ ಕೊಳ್ಳೋರು ನನ್ನ ಹತ್ರ ಬರಬೇಕಾದರೆ ಒಬ್ಬಬ್ರು ಒಂದೊಂದು ತರಹಾ ಬರತಾರ್ರಿ. ಒಬ್ಬಾತ ಹೋರಿ ಕೊಡಿಸು ಅಂತ ಬರತಾನ. ಒಬ್ಬಾತ ಕೋಣನ್ನ ಕೊಡಿಸು ಅಂತ ಬರತಾನ, ಮತ್ತೆ ಇನ್ನೊಬ್ಬಾತ ಆಕಳ ಕೊಡಿಸು ಅಂತ ಬರತಾನ ಯಾರ್ಯಾರಿಗೆ ಏನೇನು ಬೇಕೊ ಅವ್ರನ್ನ ನಾನು ಕೊಡಿಸಬೇಕು. ಕೊಡಿಸುವುದು ಅಷ್ಟೆ ಅಲ್ಲರಿ. ಅದರ ಸುಳಿ. ಸೂತ್ರ. ಕಾಲು, ಕೈಯ್ಯ. ಬಾಲ ಇಷ್ಟ ಅಲ್ಲರಿ. ಇನ್ನು ಎಲ್ಲಾ ಜಾಗನು ಪರೀಕ್ಷೆ ಮಾಡಿ ಕೊಡಿಸಬೇಕು. ಹಂಗ ಪರೀಕ್ಷೆ ಮಾಡಿ ನಾವ್ರ ಕೊಡಿಸದೆ ಇದ್ರೆ ನಮ್ಮ ಹೆಸರಿಗೆ ಬೊಬ್ಬೆ ಹೊಡಿತಾರ ಈ ದನ ಪೊಯ್ದು ಜನ. ಈ ದಲಾಲಿ ಕೆಲಸದಂತ ಹೊಲಸು ಕೆಲಸ ಯಾವುದು ಇಲ್ಲರಿ. ಯಾಕಂದ್ರ ಮುದುಕರಿಗೆ ಮದುವೆ ಮಾಡಿದಂಗ ನೋಡ್ರಿ. ನಾವ್ರ ದುಡುದುದ್ದೆಲ್ಲ ಇನ್ನೊಬ್ಬರ ಪಾಲು. ನನಗೆ ಸಾಕಾಗಿ ಹೋಗೈತ್ರಿ. ಈ ದಂದೆನಾ ನಾ ಮಾಡಕ ಹತ್ತಿ 10 ವರ್ಷ ಆಯ್ತು. ಒಂದು ಹೊಲನಾದ್ರು ತೊಗಳ್ಳಿಲ್ಲ. ಒಂದು ಮನೆನಾದ್ರು ಕಟ್ಟಿಸಲಿಲ್ಲ, ನಮ್ಮ ತಂಗಿ ಕೆಂಪವ್ವನ್ನ ಮದುವೆನಾದ್ರು ಮಾಡಲಿಲ್ಲ.. ಸಂತಿ ಟೈಮ್ ಆಯ್ತು. ಇನ್ನು ಸಂತ್ಯಾಕ ಹೋಗೋಣ, ಆಗಲೆ ದನ ಕಲತಿರಬಹುದು
[ ಎದುರುಗಡೆ ದಾನ ಬರುವನು ]

**ದಾನ** – ನಮಸ್ಕಾರ್ರಿ ದಲಾಲಿ ಧರ್ಮಣ್ಣರೇ ?

**ಧರ್ಮಣ್ಣ** – ನಮಸ್ಕಾರ ಬಾರ್ಲೆ ದಾನ ಏನ ದನ ಕೊಳ್ಳಕ ಬಂದಿಯೇನು ?

**ದಾನ** – ಹೌದ್ರಿ. ಮತ್ತೆ ನಿಮ್ಮನ್ನ ಹುಡುಕೋದು ಏನುಕ್ರಿ. ಅಲ್ಲರೀ ಧರ್ಮಣ್ಣರ ಈಗ ನಾಲ್ಕು ವಾರ ಸಂತ್ಯಾಕ ಬಂದಿಲ್ಲಲ್ಲರಿ. ನಾಲ್ಕು ವಾರದಿಂದ ನಿಮ್ಮನ್ನ ಸಂತ್ಯಾಗ ಹುಡಿಕ್ಯಾಡಿ ಹುಡಿಕ್ಯಾಡಿ ಸುಮ್ಮನ ರೊಕ್ಕ ಖರ್ಚ ಮಾಡಿಕೊಂಡು ಹೋಗಿನಿ ನೋಡ್ರಿ,

**ಧರ್ಮಣ್ಣ** – ಹೌದವ ಈಗ ನಾಲ್ಕು ವಾರದಿಂದ ನಾ ಸಂತ್ಯಾಗ ಬಂದಿಲ್ಲ. ನಾನು ಊರಗ ಇದ್ರಲ್ಲ ಸಂತ್ಯಾಕ ಬರೋದು.

**ದಾನ** – ಹೌದೇನ್ರಿ!! ಎಲ್ಲಿಗೆ ಹೋಗಿದ್ರಿ.

**ಧರ್ಮಣ್ಣ** – ಇನ್ನೆಲ್ಲಿಗಪ್ಪ. ನಮ್ಮ ಜೀವಕ ಆ ಮಂಗಳೂರರು ಮೂಲಾಗೆರಲ್ಲಾ. ಅದಕ "ಆಂದ್ರಾ" ಕಡೆ ಹೋಗಿದ್ನೆಪ ಕೋಣಗಳ ಖರೀದಿ ಮಾಡಕ. ಅವರಿಗೆ ಹಳ್ಳೆಳ್ಳಿ ತಿರುಗಿ ನೂರಾರು ಕೋಣಗಳನ್ನ ಜೋಡಣೆ ಮಾಡಿ ಕೊಟ್ರು ಅಲ್ಲಿಗೂ ನಮ್ಮನ್ನ ಕೈ ಬಿಡುವುದಿಲ್ಲ. ಮಂಗಳೂರು ಮುಟ್ಟಿಸಿ ಬರ್ರಿ ಅಂತ ನಮ್ಮನ್ನ ತಮ್ಮ ಹಿಂದೆ ಎಳಕೊಂಡು ಹೊಕ್ಕಾರ ಮಂಗಳೂರು ಮುಟ್ಟಿಸಿ ನಿನ್ನೆ ರಾತ್ರಿ ಬಂದೆ ನೋಡಪಾ.

**ದಾನ** – ನಡ್ರಿ ನಡ್ರಿ ಹೋಗನು ನಡ್ರಿ. ಈಗ ಸಂತ್ಯಾಕ ಹೊಂಟಿರಿ ಹೌದಲ್ಲ.

**ಧರ್ಮಣ್ಣ** – ಹೌದಪ ಈಗ ಸಂತ್ಯಾಕ ಹೊಂಟಿನಿ. ನೀನೇನು ಕೊಳ್ಳಾಕ ಬಂದೀ ?

**ದಾನ** – ನಮಗ ಒಂದು ಚಲೋದು ಮೈಕಟ್ಟಿದ್ದುದ್ದು ಕೈ ಕಾಲಗ ಬಂದು ಬಸ್ತು ಇದ್ದದ್ದು ಒಂದು ಆಕಳ ಮಣಕ ಬೇಕರಿ.

**ಧರ್ಮಣ್ಣ** – ಅಲ್ಲಲೇ ದಾನ ಮಣಕನ ತಗೊಂಡು ಹೋಗಿ ಏನ ಮಾಡ್ತಿ, ಒಂದು ಸೂಲು ಎರಡು ಸೂಲು ಈದುದ್ದರ ಒಯಿದಿದ್ರೆ ಅವೆಲ್ಲ ಸಾರಾಗಿರತಾವು. ನಿನಗೆ ಏನು ತಕರಾರು ಮಾಡುದಂಗ ಹಾಲನಾದ್ರು ಕೊಡತಾವಪ. ಮಣಕನ ತಗೊಂಡು ಹೋಗಿ ಏನು ಮಾಡತಿಯಲೆ? ಅದು ಕಟಿಗೊಂಡು ಗಬ್ಬಾಗಿ ಯೀದಮೋಲೇನೆ ಹಾಲು ಕೊಡೋದು. ಸುಮ್ಮನೆ ನನ್ನ ಗುರ್ತಿಲೆ ಚಲೋ ಥಳಿಯು ಎರಡು ಸೂಲು ಆಕಳ ಐತಿ. ತೊಗೊಂಡು ಹೋಗು.

**ದಾನ** – ಛೆ, ಛೆ, ಧರ್ಮಣ್ಣರೇ ಸೂಲುವಡದ ಆಕಳ ಬೇಕಿಲ್ಲರಿ, ನಮಗ ಚಲೋ ಮಣಕನ ಬೇಕು.

**ಧರ್ಮಣ್ಣ** – ಅಲ್ಲಲೇ ದಾನ ನಾನೆಷ್ಟು ನಿನ್ನೊಳ್ಳೆದಕ ಹೇಳಿದ್ರು ನೀನು ಮಣಕನ ಬೇಕು ಅಂತಿಯಲಲೇ ?

ದಾನ – ಹೌದ್ರಿ ನನಗೆ ಮಣಕನ ಬೇಕು. ಯಾಕಂದ್ರ ನಮ್ಮ ಮನಿಯಾಗ ಮನಿ ಹುಟ್ಟಿದ್ದು ಒಂದು ಹೋರಿ ಐತ್ರಿ ಅವನ ಅವ್ವನಾ ಅದು ಬಂಟಿ ಆಗಿದ್ಕ ನಾವು ಎಂಥಾ ಹಗ್ಗ ಹಚ್ಚಿದ್ರು ಕಿತ್ತುಗೊಂಡು ಹೋಗಿ ಸಿಕ್ಕಸಿಕ್ಕವರ ಹೊಲ ಹೊಕ್ಕು ಸಿಕ್ಕಾಬಟ್ಟೆ ಮೆಯ್ದು ಫಿರಾದಿ ತರಕ ಹತ್ತೈತ್ರಿ. ಅವರಿಂದ ಜನರ ಕೂಡ ನಮಗ ಅನಿಸಿಕೊಂಡು ಸಾಕಾಗಿ ಬಿಟ್ಟೈತಿ. ಅದಕ ನಮ್ಮ ತಂದೆಯವರು ಲೇ.... ದಾನ ನಮ್ಮ ಹೋರಿ ಬಂಟಿ. ಅದಕ ಹಂಗ ಮಾಡತೈತಿ. ಅದಕ ಮೊದಲು ಸಂತ್ಯಾಗ ಹೋಗಿ ಇದರ ಜೋಡಿ ಚಲೋ ಆಕಳ ಮಣಕನ ತಂದು ಕಟ್ಟಿಬಿಡು. ಆಮೇಲೆ ಮುಗುಂದು ಬಿದ್ದಲ್ಲೆ ಬಿದ್ದಿರತೈತಿ. ನೋಡಂತ ಹೇಳಿದ್ರು ಅದಕ ನಮಗ ಬಿಟ್ಟಿದ್ದು ಬಿಟ್ಟು ಸಧ್ಯ ಆಕಳ ಮಣಕನ ಕೊಡಿಸು ನಡ್ರಿ.

ಧರ್ಮಣ್ಣ – ಅಷ್ಟಲೇ ಹೋರಿ ಜತೆಗೆ ಇನ್ನೊಂದು ಹೋರಿನಾದ್ರು ತಗೊಂಡು ಹೋದ್ರ ಉಡಕಾದ್ರು ಬರತೈತಿ; ಹೋಗಿ ಹೋಗಿ ಅವರ ಜೊತಿಗೆ ಮಣಕನ ಕಟ್ಟತೀನಿ ಅಂತಿಯಲ್ಲಲೇ!!

ದಾನ – ಹಂಗಲ್ಲರಿ ಧರ್ಮಣ್ಣನವರೇ ನಮ್ಮ ಹೋರಿ ಮನ್ಯಾಗ ಹುಟ್ಟಿದ್ದು ಅಂತ ಇಲ್ಲಿಯವರೆಗೆ ಊಡಿಲ್ಲ, ಸಾರ ಮಾಡಿಲ್ಲ. ಅದರಾಗ ಮುಗಂದು ಎರಡ ಹಲ್ಲ ಐತ್ರಿ. ಈಗ ಊಡಿದ್ರ ಎದೆ ಹೋಗಿಬಿಡತೈತ್ರಿ ಹಂಗ ಬಿಟ್ರೆ ಬ್ಯಾರಾರು ಹೊಲಕ ತುಡಿಗೆ ಹೊಕತ್ರಿ. ಅದಕ ಅದರ ಜೊತಿಗೆ ಒಂದು ಮಣಕನ ಕಟ್ಟಿಬಿಟ್ರೆ ಹೋರಿಗೂ ಅನುಕೂಲ ಮಣಕಗೂ ಅನುಕೂಲ ಮುಂದ ನಮಗ ಹಾಲಿಗೂ ಅನುಕೂಲ ಹಂಗಂತ ನಾನು ಈಗ ಮಣಕನ ಖರೀದಿಗೆ ಹೊಂಟೀನಿ ನೋಡ್ರಿ.

ಧರ್ಮಣ್ಣ – ನಿನ್ನ ಹೋರಿ ಇಟಕೊಂದು ಐತಿ ಅಂಬೋದು ನನಗೇನು ಗೊತ್ತಲೆಯಪಾ! "ಅವನವ್ವನೂ" ಹಂಗಾದರ ಅವರ ಜೊತಿಗೆ ಮಣಕನ ಕಟ್ಟಲೇ! ಮುಗುಂದು ಆರು ತಿಂಗಳು ಅನ್ನೋದರಾಗ ಅದರ ಸೊಕ್ಕು ಮುರಿದು ಕಟ್ಟಿದ ಕಣ್ಯಾಗ ಗ್ವಾದ್ಲಿ ನಕ್ಕಂತ ಬಿದ್ದಿರತೈತಿ,

**ದಾನ** – ಅಗಕರಿ ನಿಮಗೆ ಹೇಳಿದ್ದು. ನಡಿರಿ ಹೋಗನು ಸಂತ್ಯಾಕ, ಚಲೋ ಮಣಕನ ಹುಡುಕೋನ.

**ಧರ್ಮಣ್ಣ** – ನಿನ್ನ ಹೋರಿ ಲೆಕ್ಕಕ್ಕ ಮಣಕ ಸಿಗಬೇಕಾದ್ರೆ ಸಂತ್ಯಾಕ ಹೋಗನು ನಡಿ, ಮುಂಜಾನೆ ಹೊತ್ತಿನಾಗ ಆದ್ರ ನಾಲ್ಕು ಕಡೆಯಿಂದ ದನಗಳು ಬಂದಿರತಾವು. ಅವ್ರಗ ಚಲೋ ಮಣಕನ್ನ ನೋಡಿ ತಗನನು ನಡಿ.

**ದಾನ** – ನಡ್ರಿ ನಡ್ರಿ ಹೋಗನು. [ಕೆಂಪಿ ಒಳಗಿನಿಂದ ಬರುವಳು]

**ಕೆಂಪಿ** – ಯಣ್ಣ ಏ ಯಣ್ಣ.

**ಧರ್ಮಣ್ಣ** – ಯಾಕವ್ವ! ನೀಯಾಕ ಬಂದಿ ಇಲ್ಲಿಗೆ.

**ಕೆಂಪಿ** – ಅಲ್ಲಣ್ಣ, ನೀನು ಮನೆಯಿಂದ ಬರುವ ಮುಂದೆ ಏನು ಬಿಟ್ಟು ಬಂದಿ ಏಳು?

**ಧರ್ಮಣ್ಣ** – ಏನ ಬಿಟ್ಟು ಬಂದಿನವ, ನಮ್ಮ ವ್ಯವಹಾರಕ ಬೇಕಾದದ್ದು ಈ ಟವಲ್ ಅದನ್ನ ಮರಿದಂಗ ತಂದೀನಿ, ಮತ್ತೇನ ಮರೆತೀನಿ?

**ದಾನ** – [ಸ್ವಗತ] ನಮ್ಮ ಹೋರಿ ಜತಿಗಂತು ಒಂದು ಮಣಕನ ಹೊಯ್ತೀನಿ. ನನ್ನ ಜೊತಿಗೆ ಇಂತಾದೊಂದು ಆಗಿಬಿಟ್ರೆ ನಮ್ಮ ಮನೆ ಹುಕ್ಕಿ ಹುಕ್ಕಿ ಹರಿತೈತಿ ನೋಡ್ರಿ.

**ಕೆಂಪಿ** – ಯಾಕ ಹುಡುಕುತಿಯೋ ಯಣ್ಣಾ, ಅಲ್ಲಾ ಬುತ್ತಿನ ಮರತ ಬರೋದಾ ಇವತ್ತು ಹಗಲೆಲ್ಲಾ ಉಪವಾಸ ಸಾಯುತಿದ್ದಿ ನೋಡು ತಗೋ ಬುತ್ತಿನ, ನಾನಿನ್ನು ದನಾ ಬಿಟಗೊಂಡು ಹೋಗಬೇಕು.

**ಧರ್ಮಣ್ಣ** – [ಬುತ್ತಿ ತೆಗೆದುಕೊಂಡು] ಹೌದು ನೋಡವ್ವಾ, ಹೋಗವ್ವಾ ನೀ ಹೋಗು ದನಗಳ ಹೊಟ್ಟಿ ತುಂಬಾ ಮೇಯ್ಸಿಕೊಂಡು ಬಾರವ್ವ,

**ದಾನ** – [ದಾನ ಕೆಂಪಿಯನ್ನು ನೋಡುವನು ಕೆಂಪಿ ದಾನನನ್ನು

ನೋಡುವಳು ] ಅಲ್ಲರಿ ಧರ್ಮಣ್ಣರ ನಿಮ್ಮ ತಂಗಿನೂ ಸಂತ್ಯಗೆ ಕರೆದ್ಕೊಂಡು ಬರಬೇಕ್ರಿ? ಮಣಕನ ಪರೀಕ್ಷೆ ಮಾಡಕ ಹೆಣಮಕ್ಕಳು ಬೆಸ್ರಿ. ಯಾಕಂದ್ರ ಅದರಾಗ ಸಾದ ಇದ್ದಿದ್ದು ನೋಡಿ ತಗೋಣಕ ಬರತೈತ್ರಿ.

**ಧರ್ಮಣ್ಣ** – ಯಾಕಲೇ ದಾಸ ನಾನೊಬ್ಬನ ದಲಾಲಿ ಮಾಡೋದ ಅಲ್ದ, ನಮ್ಮ ತಂಗೀನೂ ದಲಾಲಿ ಮಾಡಕ ಹಚ್ಚಬೇಕಂತ ಮಾಡಿಯೇನಲೇ? ನನಗೆ ಸಾಕಷ್ಟು ಅನುಭವ ಐತಿ ನಡಿಯಲೇ, ಕೊಡುಸ್ತೀನಿ ನಡಿ. ಹೋಗವ್ವ ತಂಗಿ ನೀ ಹೋಗು.

**ಕೆಂಪಿ** – ಹೋಗುತಿನ ಯಣ್ಣ. [ ಕೆಂಪಿ ಹೋಗುವಳು ]

**ಧರ್ಮಣ್ಣ** – ಮಗ ಇವನು ಮಣಕನ ಕೊಡ್ಲಾಕ ಬಂದು ಎಲ್ಲಾ ಅನುಕೂಲ ಮಾಡಿಕೊಂಡು ಹೋಗಬೇಕಂತ ಮಾಡ್ಯನ ಮಗ. ಲೇ! ದಾಸ ಅಲ್ಲೇನ್ಲೆ ನೋಡ್ತಿ. ಸಂತಿ ಮುಗದೀತು ಹೋಗನು ನಡಿ. [ ಹೋಗುವರು ]. [ ಅದೇ ರಸ್ತೆದಲ್ಲಿ ಬ್ಯಾಗ್ ಲಗೇಜ್‌ನೊಂದಿಗೆ ವಿಶ್ವಚಂದ್ರ. ರವಿಚಂದ್ರ ಎದುರು ಬದರಾಗುವರು ].

**ರವಿಚಂದ್ರ** – ಹಲೋ ವಿಶ್ವಚಂದ್ರ!

**ವಿಶ್ವಚಂದ್ರ** – ಹಲೋ ರವಿಚಂದ್ರ!

**ರವಿಚಂದ್ರ** – ವಿಶ್ವಚಂದ್ರ ತುಂಬಾ ಸಂತೋಷವಾಯಿತು. ನೀನು F. D. C. ಯಾಗಿದ್ದು ನನಗೆ ಮೊದಲೆ ಗೊತ್ತಾಯಿತು. ನಾನು ನಿನ್ನ ನಿರೀಕ್ಷೆಯನ್ನೇ ಮಾಡುತ್ತಿದ್ದೆ.

**ವಿಶ್ವಚಂದ್ರ** – ರವಿಚಂದ್ರ! ನಾನು ನೀನು ಒಂದೇ ಕ್ಲಾಸಿನಲ್ಲಿ ಓದಿದೆವು. ನೀನು ಡಾಕ್ಟರ್ ಕೋರ್ಸ್ ಓದಲು ಹೋದೆ, ನಾನು M. A. ತರಗತಿಗೆ ಹೋದೆ. ಆದರೂ ನಾನು ನೀನು ಒಂದೇ ಕಡೆ ಕೆಲಸ ಮಾಡುವ ಸುಯೋಗ ಈಗ ಒದಗಿಬಂತು ನೋಡು. ಇಷ್ಟು ದಿನಗಳವರೆಗೂ ಅಗಲದ ಈ ನಮ್ಮ ಸ್ನೇಹ ಹಿಂದಿನಂತೆ ಸದಾ ಹೀಗೆಯೇ ಮುಂದುವರಿಯಲಿ.

**ರವಿಚಂದ್ರ** – ವಿಶ್ವಚಂದ್ರ! ನನ್ನ ನಿನ್ನ ಸ್ನೇಹ ಎಂತಹುದು ಎಂದರೆ ಫೂವಿನ ಹಣ್ಣಿನ ರಸದಲ್ಲಿ ಸಕ್ಕರೆಯನ್ನು ಬೆರಸಿದರೆ ಅದೆಷ್ಟು ಮಧುರವಾಗುವದೋ ಅದರಂತೆ ನಮ್ಮಿಬ್ಬರ ಸ್ನೇಹ.... ಇದು ಎಂದೆಂದು ಅಮರ!

**ವಿಶ್ವಚಂದ್ರ** – ರವಿಚಂದ್ರ ಇಂತಹ ಸ್ನೇಹಿತನಿಗೆ ನೀನೊಂದು ದೊಡ್ಡ ತಪ್ಪು ಮಾಡಿರುವಿ ಗೊತ್ತೆ? ಅದನ್ನು ನೆನಿಸಿಕೊಂಡರೆ ನಿನ್ನ ಮುಖ ಕೂಡ ನೋಡಬಾರದು ಎನಿಸುತ್ತದೆ ನನಿಗೆ.

**ರವಿಚಂದ್ರ** – [ ಗಾಬರಿಯಿಂದ ] ನಿನಗೆ ನಾನೇನು ಅಂತಹ ತಪ್ಪು ಮಾಡಿರುವೆ ಮಿತ್ರ!

**ವಿಶ್ವಚಂದ್ರ** – ರವಿಚಂದ್ರ ಜೀವನದಲ್ಲಿ ಮರೆಯಲಾರದಂಥಹ ತಪ್ಪು ಮಾಡಿರುವಿ.

**ರವಿಚಂದ್ರ** – ವಿಶ್ವಚಂದ್ರ! ನೀನಾಡುವ ಮಾತು ನನಗೊಂದೂ ತಿಳಿಯದಾಗಿದೆ. ಬಿಡಿಸಿ ಹೇಳಿದರೆ ನನ್ನ ತಪ್ಪಿಗೆ ಶರಣು ಹೋಗುತ್ತೇನೆ.

**ವಿಶ್ವಚಂದ್ರ** – ಇದಕ್ಕಿಂತಲೂ ಇನ್ನೆಂತಹಾ ತಪ್ಪು ಮಾಡಬೇಕೆಂದಿರುವಿ. ರವಿಚಂದ್ರ ನಾನು ನೀನು ಓದುವಾಗ ಒಂದೇ ರೂಮಿನಲ್ಲಿ ಇದ್ದವು. ಒಂದೇ ತಟ್ಟೆಯಲ್ಲಿ ಊಟ ಮಾಡುತ್ತಿದ್ದೆವು. ಇಂಥಹ ಮಮತೆಯ ಮಿತ್ರನಿಗೆ ತಿಳಿಸದೆ ನೀನು ಮ್ಯಾರೇಜ್ ಮಾಡಿಕೊಂಡಿಯಲ್ಲಾ ,ಇದು ಅಪರಾದವಲ್ಲವೆ ?

**ರವಿಚಂದ್ರ** – **ಕ್ಷಮಿಸು** ವಿಶ್ವ!! ನನ್ನ ಮ್ಯಾರೇಜ್ ತುಂಬಾ ಆವಸರದಲ್ಲಿ ನಡೆದು ಹೋಯಿತು. ಮೇಲಾಗಿ ನಿನಗೆ ತಿಳಿಸಬೇಕೆಂದರೆ ನಿನ್ನ ಅಡ್ರುಸ್ ಕೂಡ ನನಗೆ ಗೊತ್ತಿರಲಿಲ್ಲ. ಹೀಗೇನಾಗಿದೆ ವಿಶ್ವ! ನಿನ್ನ ಅತ್ತಿಗೆಯ ಕಡೆಯಿಂದ ನೀನು ಬಯಸಿದ ಸಿಹಿಯನ್ನು ಮಾಡಿಸಿಕೊಡುತ್ತೇನೆ. ಬಾ ಮಿತ್ರ ನಿನ್ನ ಅತ್ತಿಗೆ ಎಷ್ಟು ಚೆನ್ನಾಗಿ ಇರುವಳು ಗೊತ್ತೆ? ನನ್ನ

ಮೇಲಂತೂ ಇಲ್ಲದ ಪ್ರೀತಿ. ಈಗ ನಿನ್ನತ್ತಿಗೆ ಬರೆ ಅತ್ತಿಗೆಯಾಗಿ ಉಳಿದಿಲ್ಲ ಎರಡುಮಕ್ಕಳ ತಾಯಿಯು ಕೂಡ ಹೌದು.

**ವಿಶ್ವಚಂದ್ರ** – ನೋಡು ಮಿತ್ರ ನೀನು ತುಂಬಾ ಭಾಗ್ಯವಂತ. ನೀನು ಮ್ಯಾರೇಜ್ ಮಾಡಿಕೊಂಡು ಮುತ್ತಿನಂಥ ಹೆಂಡತಿ ಜೊತೆಗೆ ಎರಡು ಮಕ್ಕಳನ್ನು ಕಂಡೆ. ಆದರೆ ನಿನ್ನ ಈ ಭಾಗ್ಯ ನನಗೆಂದಿದೆಯೋ ಏನೋ ?

**ರವಿಚಂದ್ರ** – ನಿನ್ನಂತಹ ವಿದ್ಯಾವಂತ ಯುವಕನಿಗೆ ಕನ್ಯೆಯನ್ನು ಹುಡುಕಿ ಮದುವೆ ಮಾಡುವುದು ಎಷ್ಟರ ಕೆಲಸ. ನೀನು ಒಪ್ಪಿಗೆಯನ್ನು ಕೊಟ್ಟರೆ ನಾನೇ ನಿಂತು ನಿನ್ನ ಮದುವೆಯನ್ನು ಒಳ್ಳೆ ವಿಜೃಂಭಣೆಯಿಂದ ಮಾಡುವೆ. ಹಾ. ಇನ್ನೊಂದು ಮಾತು. ನಿನ್ನ ಮದುವೆಯಾಗುವವರೆಗೂ ನೀನು ನನ್ನ ಮನೆಯಲ್ಲಿಯೇ ಇರು. ನೀನೇನು ಬೇರೆಯವನಲ್ಲ. ನನ್ನ ಒಡಹುಟ್ಟಿದ ತಮ್ಮನ ಹಾಗೆ.

**ವಿಶ್ವಚಂದ್ರ** – ಅಲ್ಲ ಮಿತ್ರ ಮನೆಯಲ್ಲಿ ಅತ್ತಿಗೆ ಇದ್ದಾಳೆ ಸುಮ್ಮನೆ ನಿನಗೇಕೆ ತೊಂದರೆ.

**ರವಿಚಂದ್ರ** – ಏಕೆ ವಿಶ್ವ! ನಿನ್ನ ಅತ್ತಿಗೆ ಕೈಯಿಂದ ಊಟ ಮಾಡಲು ನಿನಗೆ ಸಂಕೋಚವೆ? ಮಿತ್ರ ನಿನ್ನತ್ತಿಗೆ ಎಲ್ಲರಂತೆ ಅಲ್ಲ. ಮನೆಗೆ ಬಂದು ನೋಡು ನಿನ್ನತ್ತಿಗೆ ಗುಣ ಹೇಗಿದೆಯೆಂಬುದನ್ನು.

**ವಿಶ್ವಚಂದ್ರ** – ನನ್ನ ಅತ್ತಿಗೆಯಲ್ಲಿ ಅಂಥಹ ಒಳ್ಳೆಯಗುಣ ಇದೆಯೆಂದ ಮೇಲೆ ನಾನು ನಿನ್ನ ಮನೆಗೆ ಬರಲು ಸಂಕೋಚವಿಲ್ಲ. ನಡೆ ಹೋಗೋಣ.

**ರವಿಚಂದ್ರ** – ನಡೆ ಹೋಗುವಾ. [ ಹೋಗುವಾಗ ಎದುರಿಗೆ ಸೂರ್ಯಚಂದ್ರ, ಅರ್ಚನಾ ಬರುವರು ] ಹಲೋ ಸೂರ್ಯಚಂದ್ರ ಏನು ಈಕಡೆ ಹೊರಟಿರುವಿರಲ್ಲ.

**ಸೂರ್ಯಚಂದ್ರ** – ಮಿತ್ರ ಹಾಗೆ ವನ ವಿಹಾರಕ್ಕೆಂದು ಹೊರಟಿರುವೆವು, ಅಂದ ಹಾಗೆ ಇವರ ಪರಿಚಯವಾಗಲಿಲ್ಲ.

**ರವಿಚಂದ್ರ** – ಹಾ! ಇವನು ನನ್ನ ಆತ್ಮೀಯ ಬಾಲಮಿತ್ರ. ಈಗ ನಮ್ಮ ದವಾಖಾನೆಗೆ F.D.C. ಯಾಗಿ ಕೆಲಸ ಮಾಡಲು ಬಂದಿದ್ದಾನೆ.

[ ವಿಶ್ವ – ಸೂರ್ಯ ಥ್ಯಾಂಕ್ಸ್ ಕೊಡುವರು ]

**ವಿಶ್ವಚಂದ್ರ** – ಅಂದ ಹಾಗೆ ಮಿತ್ರ ಇವರ ಪರಿಚಯ.

**ರವಿಚಂದ್ರ** – ಇವರು ಈ ಊರಿನ ಆಗರ್ಭ ಶ್ರೀಮಂತರಾದ ಕೀರ್ತಿಚಂದ್ರರ ಮಗ ಸೂರ್ಯಚಂದ್ರ ಅಂತ.... ಇವರು.... ಇವರ ಶ್ರೀಮತಿಯವರು ಹೆಸರು ಅರ್ಚನ ಅಂತಾ [ ಅರ್ಚನಾ ಕೈಜೋಡಿಸುವಳು ವಿಶ್ವಚಂದ್ರನ ವಕ್ರದೃಷ್ಟಿ ಅವಳ ಮೇಲೆ ಬೀಳುವುದು. ಅವಳನ್ನೇ ನೋಡುತ್ತಾ ನಿಲ್ಲುವನು ]

**ಅರ್ಚನಾ** – [ ಸಿಟ್ಟಿನಿಂದ ] ಹಾ. ಬನ್ರಿ ಹೋಗೋಣ. [ ಬೇಸರದಿಂದ ಸೂರ್ಯಚಂದ್ರನನ್ನು ಕರೆದುಕೊಂಡು ಹೋಗುವಳು ]

**ಸೂರ್ಯಚಂದ್ರ** – ಬರ್ತಿನಿ ರವಿ. [ಅರ್ಚನಾ ಸೂರ್ಯಚಂದ್ರ ಹೋಗುವರು ]

**ವಿಶ್ವಚಂದ್ರ** – ರವಿ ಈಕೆ ಸೂರ್ಯಚಂದ್ರರ ಕೈಹಿಡಿದ ಧರ್ಮ-ಪತ್ನಿಯೇ ?

**ರವಿಚಂದ್ರ** – ವಿಶ್ವ ಇವನ ಕಥೆ ದೊಡ್ಡದಿದೆ, ಅವನ ಕೈಹಿಡಿದ ಹೆಂಡತಿ ಅಲ್ಲ ಆಕೆ. ಅವಳೊಬ್ಬ ಸೂಳೆ. ಈ ವಿಚಾರವಾಗಿ ಅವನಿಗೆ ಅವಳ ಸಹವಾಸವನ್ನು ಬಿಡುವುದಕ್ಕಾಗಿ ನಾನು ಸಾಕಷ್ಟು ಸಲ ಹೇಳಿದೆ ಆದರೆ ಅವನು ತನ್ನ ಮಾರ್ಗವನ್ನು ಬಿಡುವಂತಿಲ್ಲ. ಅವನಿಗೆ ಈಗ ಗೊತ್ತಾ-ಗುವುದಿಲ್ಲ. ಅವಳು ಇವನನ್ನು ವಂಚಿಸಿ ಕೈ ಕೊಟ್ಟಾಗ ತಿಳಿಯುವುದು ನನ್ನ ಮಾತಿನ ಅರ್ಥ,

**ವಿಶ್ವಚಂದ್ರ** – ಹೌದಾ ಇವಳೊಬ್ಬ ಸೂಳೆಯೇ. ಇಂಥವಳನ್ನು ಜೊತೆಗೆ ಕರೆದುಕೊಂಡು ಎಷ್ಟು ಧೈರ್ಯವಾಗಿ ವನ ವಿಹಾರಕ್ಕೆ ಹೊರಟಿರುವನಲ್ಲ. ಇವನಿಗೆ ಸ್ವಲ್ಪವರೂ ನಾಚಿಕೆ ಬರುವುದಿಲ್ಲವೇ.

**ರವಿಚಂದ್ರ** – ಹೋಗಲಿ ಬಾರಯ್ಯ ಅವನ ವಿಚಾರ ನಮಗೇಕೆ. ಅವನೊಬ್ಬ ನನ್ನ ಸ್ನೇಹಿತನೆಂದು ಮಾತನಾಡಿಸಬೇಕಾಯಿತು ಅಷ್ಟೆ? ಬಾ ಬಾ ವೇಳೆಯಾಯಿತು ನಿಮ್ಮ ಅತ್ತಿಗೆ ಧಾರಿ ಕಾಯುತ್ತಿರಬಹುದು. [ ಹೋಗುವರು ]

## ಪ್ರವೇಶ ೩ [ಜಂಗಲ್]

[ ಅರ್ಚನಾ ಸೂರ್ಯಚಂದ್ರ ಹೊರಡುವರು ]

**ಸೂರ್ಯಚಂದ್ರ** – ಅರ್ಚನಾ! ಎಷ್ಟೊಂದು ಸುಂದರವಾಗಿದೆ ಈ ವನ. ಜಗದ ಜಂಜಾಟದಿಂದ ಬೇಸರಗೊಂಡು ಬಂದ ನವ ಪ್ರಣಯಿಗಳಿಗೆ ಸುಂದರವಾದ ತಾಣ. ಈ ನಿಸರ್ಗದ ಮಡಿಲಲ್ಲಿ ನೀನೋರ್ವ ದೇವಲೋಕದ ಅಪ್ಸರೆಯಂತೆ ಕಾಣಿಸುತ್ತಿರುವಿ. ಈ ನಿನ್ನ ಆಗಮನದಿಂದ ಈ ವನ ದೇವತೆಯು ಸ್ವಭಗು ಇಮ್ಮಡಿಯಾಯಿತು.

**ಅರ್ಚನಾ** – ಸಾಕು ಮಾಡಿ ನಿಮ್ಮ ವರ್ಣನೆ. ನನ್ನ ವರ್ಣಿಸುವುದೇ ನಿಮಗೊಂದು ಕೆಲಸವಾಗಿಬಿಟ್ಟಿದೆ. ನಿಮ್ಮ ಈ ಪ್ರೀತಿಯ ಅನುಕಂಪದಿಂದ ನನ್ನಲ್ಲಿ ಬೇಸರವು ಮಾಯವಾಗಿ ಹೊಸ ಚೇತನವೇ ಮೂಡಿದ್ದರು. ಈ ಹೊಸ ಚೇತನ ಮೂಡಿದಂತೆ ನನ್ನ ನಿಮ್ಮ ಈ ಮಧುರ ಬಾಂಧವ್ಯ ಹೀಗೆ ಕೊನೆಯವರೆಗೂ ಮುಂದುವರಿಯುವುದೋ ಅಥವಾ.

**ಸೂರ್ಯಚಂದ್ರ** – ಎಂಥಹ ಮಾತನ್ನಾಡುವಿ ಅರ್ಚನಾ! ನಮ್ಮಿಬ್ಬರ ಮಧುರ ಬಾಂಧವ್ಯ ಮುರಿಯಲು ಯಾರಿಂದಲೂ ಸಾಧ್ಯವಿಲ್ಲ.

ನೀನು ನನ್ನ ಮೇಲೆ ಇಟ್ಟಿರುವ ಪ್ರೀತಿ ವಿಶ್ವಾಸ ಕೈಹಿಡಿದ ಯಾವ ಧರ್ಮಪತ್ನಿಯೂ ಇಡಲಾರಳು. ಯಾವ ಜನ್ಮದ ಋಣಾನುಬಂಧವೋ ನಮ್ಮೀರ್ವರ ದೇಹ ಸಂಭಂದ ಬೆಳದಿದೆ. ಒಮ್ಮೆ ಒಲಿದ ಈ ಹೃದಯಗಳ ಮಿಲನವಾದ ಮೇಲೆ ಮುಗದೇ ಹೋಯಿತು. ಇದು ಬಿಡಿಸಲಾರದ ಬೆಸುಗೆ ಅರ್ಚನಾ, ನಿನ್ನನ್ನು ನಾ ಎಂದೆಂದಿಗೂ ಬಿಡಲಾರೆ,

**ಅರ್ಚನಾ** – ರಾಜ ಈ ಮಾತೊಂದೆ ಸಾಕು ನನಗೆ ಏಕೆಂದರೆ ನಾನು ನಿಮ್ಮ ಕೈಹಿಡಿದ ಧರ್ಮಪತ್ನಿಯಾಗಿದ್ದರೆ ಆ ಭಯ ನನಿಗೆ ಇರುತ್ತಿರಲಿಲ್ಲ. ಎಷ್ಟಾದರು ನಾನು ಸೂಳಿ!!! ನಾನೆಷ್ಟು ಗರತಿಯಾಗಿ ಬಾಳಿದರೂ ಸಮಾಜದ ದೃಷ್ಟಿಯಲ್ಲಿ ಕೀಳೆ! ನನ್ನ ಬಗ್ಗೆ ಹಲವಾರು ಜನ ಅನೇಕ ರೀತಿಯಿಂದ ಆಡಿಕೊಳ್ಳುತ್ತಾರೆ. ಇಂದಿನ ಜಗತ್ತಿನಲ್ಲಿ ಸುಂದರವಾಗಿ ಸಾಗುತ್ತಿರುವ ಬಾಳನ್ನು ಹದಗೆಡಿಸುವ ಅಧಮರು ಸಾಕಷ್ಟು ಜನ ತುಂಬಿದ್ದಾರೆ. ನಾವು ಯಾವ ರೀತಿ ಬಾಳಿದರು ಕಷ್ಟವೇ?

**ಸೂರ್ಯಚಂದ್ರ** – ಸಮಾಜ ಹೇಗಿದ್ದರೂ. ಆಡಿಕೊಳ್ಳುತ್ತದೆ. ಆದರೆ ಹಸಿರು ತೋರಣದಲ್ಲಿ ಅಕ್ಷತೆ ಹಾಕಿಸಿಕೊಂಡು ಕೈಹಿಡಿದವರೆಲ್ಲ ಗರತಿಯರಲ್ಲ ಹೆಣ್ಣು ತನ್ನ ಹೆಣ್ತನವನ್ನು ಉಳಿಸಿಕೊಂಡಿದ್ದರೆ ಮಾತ್ರ ಅವಳು ನಿಜವಾದ ಗರತಿ, ಕೈಹಿಡಿದ ಹೆಂಡತಿಯಾದರೇನು? ಸೂಳೆಯಾದರೇನು? ಎಷ್ಟೋ ಜನ ಗರತಿಯರು ಗರತಿ ಸೂಳೆಯರಾಗಿಲ್ಲವೆ? ಸೂಳೆ ಎನ್ನುವ ಶಬ್ದಕ್ಕೆ ಭಯ ಪಡುವ ಕಾರಣವಿಲ್ಲ. ಸೂಳಿಯರು ಎಂಬುವದನ್ನು ನೀನೆ ಎತ್ತಿ ತೋರಿಸು.

**ಅರ್ಚನಾ** – ರಾಜಾ ಈ ಮಾತು ನೀವು ನನಿಗೆ ಹೇಳಬೇಕೆ ನಿಮ್ಮ ಆಶ್ರಯ ಆಗರದಲ್ಲಿ ನನಗೆಂತಹ ಕಷ್ಟ ನಿಷ್ಠೂರವು ಬಂದರೂ ನಿಮ್ಮೊಡನೆ ಭಾಗಿಯಾಗಿ ನನ್ನ ಹೆಣ್ತನವನ್ನು ಉಳಿಸಿಕೊಂಡು ಗೌರವದಿಂದ ನಡೆಯುತ್ತೇನೆ. ನೀವು ಮಾತ್ರ ನನ್ನನ್ನು ಎಂದೆಂದು ಕೈಬಿಡಬೇಡಿ ನೀವೆ ನನ್ನ ಬಾಳಿನ ಕಣ್ಣು,

**ಸೂರ್ಯಚಂದ್ರ** – ಅರ್ಚನ? ನಾನು ನಿನ್ನನ್ನು ಸುಮ್ಮನೆ ಕೈ ಹಿಡಿದಿಲ್ಲ ಸೂಳೆ ಸೂಳೆಯೆಂದು ಕರೆಯುತ್ತಿರುವ ಇಂದಿನ ಸಮಾಜಕ್ಕೆ ನಿನ್ನ ವ್ಯಕ್ತಿತ್ವವನ್ನು ಎತ್ತಿ ತೋರಿಸಬೇಕೆಂದು ನಾನು ನಿನ್ನನ್ನು ಕೈಹಿಡಿದಿದ್ದು. ನಾನು ಮದುವೆ ಮಾಡಿಕೊಳ್ಳಬೇಕೆಂದರೆ ಹೆಣ್ಣಿಗೇನು ಕೊರತೆಯೇ ನಿನ್ನನ್ನು ಬಿಟ್ಟು ಮದುವೆಯಾಗೆಂದು ನನ್ನ ಸ್ನೇಹಿತರೆಲ್ಲರೂ ಸಾರಿ ಸಾರಿ ಹೇಳಿದ್ದಾರೆ ಏಕೆಂದರೆ ಈಗಾಗಲೆ ಅವರು ಮದುವೆ ಆಗಿದ್ದಾರೆ. ಅವರು ಕೈಹಿಡಿದ ಹೆಂಡರ ಗರತತ್ವ ಎಷ್ಟಿದೆಯೋ ಸೂಳೆಯಾದ ನಿನ್ನ ಗರತತ್ವ ಎಷ್ಟಿದೆಯೋ ಎಂಬುದನ್ನು ನನ್ನ ಸ್ನೇಹಿತರಿಗೆ ತೋರಿಸಬೇಕಾಗಿದೆ. ಅದಕ್ಕಾಗಿ ನನ್ನ ಜೀವನದಲ್ಲಿ ಮದುವೆ ಮಾಡಿಕೊಳ್ಳಬಾರದೆಂದು ನಿರ್ಧಾರ ಮಾಡಿದ್ದೇನೆ. ನೀನೇ ನನ್ನ ಧರ್ಮಪತ್ನಿ! ನೀನೇ ನನ್ನ ಹೆಂಡತಿಯೂ ಕೂಡ! ಯಾರ ಮಾತಿಗೂ ಅಂಜದೆ ಅಳುಕದೆ ಧೈರ್ಯವಾಗಿ ನನ್ನೊಂದಿಗೆ ಬಾಳು ಸಾಗಿಸು.

**ಅರ್ಚನಾ** – ರಾಜ ನೀವು ಇಷ್ಟೊಂದು ನಿರ್ಧಾರ ಮಾಡಿರುವಿರಿ ಎಂಬುದು ನನಗೆ ಇಂದು ಗೊತ್ತಾಯಿತು. ಇದರಿಂದ ನನ್ನ ಮನದ ದುಗುಡವು ದೂರಾಯಿತು. ಇನ್ನು ನನಗಾವ ಚಿಂತೆಯಿಲ್ಲ. ನಾನಾರಿಗೂ ಭಯಪಡುವುದಿಲ್ಲ. ನಿಮ್ಮ ಹೃದಯ ವೈಶಾಲ್ಯಕ್ಕೆ ನಾನೆಂದಿಗೂ ಋಣಿ. [ ಅಪ್ಪಿಕೊಳ್ಳುವರು ]

**ಸೂರ್ಯಚಂದ್ರ** – ಅರ್ಚನಾ! ದಣಿದ ಹೃದಯಕ್ಕೆ ಸಂತೈಸಲು ನಿನ್ನ ಅನುರಾಗದ ಆಲಾಪನ ನೀಡಲಾರೆಯಾ.

**ಅರ್ಚನಾ** – ರಾಜ ಈ ಸಂತೋಷದ ಸಮಯದಲ್ಲಿ ನಿಮ್ಮ ತೆರೆದ ಹೃದಯವನ್ನು ಸಂತೈಸಲಾರೆನೇ ನಾನು?

**ಸೂರ್ಯಚಂದ್ರ** – ಹೂ. ಹಾಡು ಪಲ್ಲವಿ.

**ಅರ್ಚನಾ** – ಹೂ. ನುಡಿಸು ಸ್ವರ ವೀಣೆ.

— ಹಾಡು —

ಗಂಡು - ನೀನೊಮ್ಮೆ ಮಾತನಾಡೇ
ಮೌನವು ನಿನಗೇಕೆ ಈ ಜೀವ ಬಳಿಇರಲು

ಹೆಣ್ಣು - ಕನಸಲ್ಲಿ ಕಂಡ ಆಸೆ
ನನಸಾಯಿತು ಇಂದು ಹಾಡುತಲಿ ಬಳಿ ಇರಲು

ಗಂಡು - ಮನದರಸಿ ಬಳಿ ಇರಲು ಪ್ರೇಮಾಂತರಂಗ

ಹೆಣ್ಣು - ಮನದಿನಿಯ ಬಳಿಯಿರಲು ಹೃದಯಾಂತರಂಗ

ಗಂಡು - ಅನುದಿನ ಹಂಬಲಿಸಿ ನಾ ಬಯಸಿದೆ

ಹೆಣ್ಣು - ಸರಸಕೆ ನಾನಿರಲು ಬಾ ಸನಿಹಕೆ
ನೀನೊಮ್ಮೆ ಮಾತನಾಡೆ........

[ ಹಾಡು ಮುಗಿದ ಮೇಲೆ ಹೋಗುವರು ]

[ ಅದೇ ಜಂಗಲ್ - ಕೆಂಪಿ ಕೈಯ್ಯಲ್ಲಿ ಬುತ್ತಿ ಹಿಡಿದುಕೊಂಡು ಕೋಲು ಹಿಡಿದು ವಳಗಿನಿಂದ ಬರುವಳು. ದನಗಳನ್ನು ಬೆದರಿಸುತ್ತಾ]

**ಕೆಂಪಿ** - ಅಲ್ಲ ಈ ದಾನನ ಹೋರಿಗೆ ಎಷ್ಟು ಸೊಕ್ಕು ಇರಬೇಕು ಅಂತೀನಿ. ನಾನು ಎಂಥ ಚಂದ ಈ ಬೈಲಾಗ ನಮ್ಮ ಆಕಳ ದನ ಮೇಯಿಸಾಕ ಹತ್ತಿದ್ದೆ. ಆಕಳ ಚೆಂದಾಗಿ ಹೊಟ್ಟೆ ತುಂಬಾ ಮೇಯಿತಿದ್ದುವು. ಈ ದಾನನ ಹೋರಿ ನಮ್ಮ ಆಕಳ ಹಿಂಡಿನ್ಯಾಗ ಹೊಕ್ಕೊಂಡು ಸಿಕ್ಯಾಬಟ್ಟೆ ತಿರಿವ್ಯಾಡಕ ಹತ್ತೈತಿ. ಆಕಳುಗಳು ಒಂದು ಮೇಯುವಲ್ಲವು. ಎಲ್ಲಾ ಸಿಕ್ಕಾಬಟ್ಟೆ ಓಡ್ಯಾಡಕ ಹತ್ಯಾವು, ಇವ ಜೀವರ್ಸಿ ದಾನ ಎಲ್ಲಿ ಹೋಗ್ಯಾನೊ ಏನೋ ಎಲೋ ದಾನ.... ಎಲ್ಲಿ ಹೋಗಿ ಜಲ್ದಿ ಬಾರಲೋ ಲೋ ದಾನ [ ಕೂಗುವಳು ]

**ದಾನ** - ಯಾಕ ಕೆಂಪಿ ಯಾಕ ನನ್ನ ಹೆಸರು ಹಿಡಿದು ಒದರಾಕ ಹತ್ತಿ ಗಂಟಲು ಹರಿಯುತನಕ.

**ಕೆಂಪಿ** – ಲೋ ದನದಂತ ದಾನ ನಿನಿಗೆ ಏನಾದರೂ ಅರು ಐತಿ ಏನಲೋ.

**ದಾನ** – ಯಾಕಲೇ ಕೆಂಪಿ ಬಾಯಿಗೆ ಬಂದಂಗ ಮಾತನಾಡ್ತಿ ಏನು? ಒಮ್ಮೆ ಇಡಬಾರದು ಇಟ್ಟೆ ಅಂದ್ರೆ ನಿನ್ನ ಗಲ್ಲ ಕೆಂಪಾಗಿ ಹೋದಾವು. ನನಿಗೆ ಲೋ ಹಚ್ಚಿ ಮಾತನಾಡತಿ ಏನ ಸ್ವಲ್ಪ ನೋಡಿ ಮಾತಾಡು.

**ಕೆಂಪಿ** – ಯಾಕಲೋ ನನ್ನ ಗಲ್ಲ ಕೆಂಪ ಆಗಂಗ ಹೊಡಿತೀಯು ಏಲಿ. ನನ್ನ ಗಲ್ಲ ಮುಟ್ಟಾರ ಮುಟ್ಟಲೋ, ನಿನವೆಲ್ಲ ಸಡ್ಲ ಆಗಂಗ ಬಡಿದೇನು. ಈ ಕೆಂಪಿ ಅಂದ್ರ ಏನಂತ ತಿಳಿದಿಯುಲೋ.

**ದಾನ** – ಏ ಕೆಂಪಿ ಸುಮ್ಮನೆ ಯಾಕ ವದರತಿ ಈಗ ನನ್ನ ಯಾಕ ಕರಿದ್ದಿ ಹೇಳು ?

**ಕೆಂಪಿ** – ಲೋ ದಾನ ಮುಂಜಾನದಿಯಿಂದ ನಿನ್ನ ಹೋರಿ ಹಿಡು ಕೊಂಡು ಹೋಗಿ ಕಟ್ಟುತಿಯಾ ಏನ್ ನಾನು ಅದರ ಕಾಲು ಮುರಿಯೋದೊ.

**ದಾನ** – ಯಾಕಲೇ ಕೆಂಪಿ ನನ್ನ ಹೋರಿ ಏನ್ ಮಾಡೆತಿ ನಿನಗೆ.

**ಕೆಂಪಿ** – ನನಗೇನು ಮಾಡತೈತಿ ನಿನ್ನ ಹೋರಿ. ನಮ್ಮ ಆಕಳ ಗಳನ್ನೆಲ್ಲಾ ಹದಗೆಡಿಸ್ಯೈತಿ. [ಅಳುವ ಧ್ವನಿ ಮಾಡಿ] ಹೂಂ.... ? ನನ್ನ ಆಕಳುಗಳು ಒಂದು ಮೇಯುವಲ್ಲವು. ಅದಕ ಮೊದಲು ಹಿಡಿದು ಕಟ್ಟಿ ಹಾಕು ನಿನ್ನ ಹೋರಿನಾ.

**ದಾನ** – ಅಲ್ಲಲೇ ಕೆಂಪಿ ಆಕಳ ಇದ್ದಲ್ಲಿ ಹೋರಿ ಮೇಯುದು ಬ್ಯಾಡಂತಿ ಏನ್ ?

**ಕೆಂಪಿ** – ಬ್ಯಾಡಂತ ನಾಯಾಕ ಹೇಳಲಿ? ನಿನ್ನ ಹೋರಿ ಸುಮ್ನ ಮೇಯುದು ಅಲ್ಲ ನನ್ನ ಆಕಳನೆಲ್ಲ ಓಡಿಸ್ಯಾಡಕ ಹತ್ಯೈತಿ. [ಆ ಕಡೆ ಕೈ ತೋರಿಸುತ್ತ] ಅಯ್ಯಯ್ಯೋ ಅಲ್ಲಿ ನೋಡಲೋ ನಮ್ಮ ಆಕಳನ ಎಂಗ ಓಡಿಸ್ಯಾಡಕ ಹತ್ಯೈತಿ. ನಿನ್ನ ಹೋರಿ. ಮೊದುಲು ಹಿಡಿದುಕೊಂಡು ಹೋಗ-ನಿನ್ನ ಹೋರಿನಾ.

**ದಾನ** – ಅಲ್ಲಲೇ ಕೆಂಪಿ ಮನಿಯಾಗ ನಮ್ಮ ಹೋರಿಗೆ ನಾಲ್ಕು ಹಗ್ಗ ಹಾಕಿ ಕಟ್ಟಿರುತೀವಿ. ಆದರೆ ಮನೆ ಮುಂದೆ ಯಾವುದಾದರು ಆಕಳ ಹಾದು ಹೋದರೆ, ಬರೆ ವಾಸನಿ ಹಿಡಿದ "ಅಂಬಾ" ಅಂತ ಒದರಿದ್ದ ತಡ ಕಣ್ಣ ಕಿತಗೊಂಡು ಅದರ ಬೆನ್ನ ಹತ್ತಿ ಹೊಕ್ಕೈತಿ. ಇನ್ನು ನಿನ್ನ ಆಕಳ ಹಿಂಡಿನ್ಯಾಗ ಹೊಕ್ಕೈತಿ ಅಂದ ಮೇಲೆ ಬಿಟ್ಟಿತ ಮುಗುಂದು. ಬಾಯಿಗೆ ಬುರುಗು ಬರೋಮಟ ತಿರುವ್ಯಾಡತ್ತೈತಿ, ಆಮೇಲೆ ತಾನ ಸುಮ್ಮನಕತಿ ಬಿಡು,

**ಕೆಂಪಿ** – ಲೋ! ದಾನ ನಿಂದು ಹೋರಿ ಐತಿ ಅಂತ ಇಷ್ಟು ಉರದಾಡಬ್ಯಾಡ ನಿನವ್ವ ಆಕಳ ಇದ್ರು ಗೊತ್ತಕ್ಕಿತ್ತು,

**ದಾನ** – ಅದಕಲೆ ಕೆಂಪಿ ನಾ ನಿಮ್ಮಣ್ಣನ್ಗ ಹೇಳಿದ್ದು ಆಕಳ ಮಣಕನ ಕೊಡಿಸು ಅಂತಾ ನಿಮ್ಮ ಅಣ್ಣ ನೋಡಿದರ ಮೊನ್ನೆ ಬೊಮ್ಮನಹಳ್ಳಿ ಸಂತಿಗೆ ಕರಕೊಂಡು ಹೋಗಿದ್ದ ಅಲ್ಲಿ ನೋಡಿದ್ರು ನಮ್ಮ ಹೋರಿಗೆ ಸರಿಯಾದ್ದು ಒಂದು ಮಣಕ ಬಂದಿದ್ದಿಲ್ಲ ಅದಕ ಹಂಗ ಬಂದೀವಿ, ಇನ್ನು ದಾವಣಗೇರಿ ಸಂತಿಗೆ ಚಲೋ ಮಣಕ ಬಂದಿರತವಂತ ಅದಕ ಆ ಸಂತಿಗೆ ಹೋಗಿ ನಾವಂದು ಮಣಕನ್ನ ತಂದು ನಮ್ಮ ಹೋರಿ ಜತಿಗೆ ಕಟ್ಟೋವರಿಗೂ ಸ್ವಲ್ಪ ತಡಕೋ, ಯಾಕ ಬಡಕಂತಿ [ಅಷ್ಟರಲ್ಲಿ ಧರ್ಮಣ್ಣ ಬರುವನು]

**ಧರ್ಮಣ್ಣ** – ಏನ ಕೆಂಪವ್ವ ದನ ಎಲ್ಲಿ ಅದವ ನೀ ಎಲ್ಲಿ ಅದಿದಿ, ದನ ಮೇಯಿಸೋದು ಬಿಟ್ಟು ಇಲ್ಲಿ ಯಾಕ ಆದಿಯವ್ವಾ.

**ಕೆಂಪಿ** – ಯೇ ಯಣ್ಣ ಈ ದಾನನ ಹೋರಿ ಬಂದು ನಮ್ಮ ದನಗಳ ಹಿಂಡಿನ್ಯಾಗ ಹೊಕ್ಕೈತಿ. ಒಂದು ದನನು ಮೇಯಗೊಡುವಲ್ದ. ನಿನ್ನ ಹೋರಿ ಹಿಡಕೊಂಡು ಹೋಗು ಅಂದ್ರು ಹೋಗವಲ್ಲ ನೋಡ.

**ಧರ್ಮಣ್ಣ** – ಹೌದನಲೇ ದಾನ.

**ದಾನ** – ಹೌದ ಮಾವ ಅಲ್ಲಲ್ಲ ಯಣ್ಣ!

ಧರ್ಮಣ್ಣ – ಲೇ ಕಿಸಬಾಯಿದಾಸ! ಹೌದು ಅಂತ ಎಂಥ ಚೆಂದ ಅಂತಿಲೇ ಈಗ ನೀನೇನು ಮರ್ಯಾದಿಲೇ ಹಿಡ್ಕೊಂಡು ಹೊಕ್ಕಿಯಾ ಏನ ಸಂತಿಗೆ ನಾನ ಒಡಕಂಡು ಹೋಗಿ ಮಾರು ಅಂತಿಯೋ,

ದಾನ – ನೋಡಿ ಧರ್ಮಣ್ಣರಾ ನೀವು ನನಿಗೆ ಚಲೋ ಮಾತಕನ್ನ ಕೊಡಿಸೋವರಿಗೂ ನಮ್ಮ ಹೋರಿ ನಿಮ್ಮ ಆಕಳ ಹಿಂಡಿನ್ಯಾಗ ಇರಲಿ. ಯಾಕಂದ್ರ ಮನಿಯಾಗ ಕಣ್ಯಾಗ ನಿಲ್ಲದಿಲ್ಲರಿ.

ಧರ್ಮಣ್ಣ – ಹೌದ್ದ ಮಗನ! ನೀನು ಕುಲದ ಬಸಣ್ಣ ಇದ್ದಂಗ ಅದಿಪಿ. ಮನಿಯಾಗ ಹೋರಿ ನಿಲ್ಲದಿಲ್ಲಂತ ಮಗ ಅದಕ ಹಿಡಕೊಂಡು ಹೋಗದಿಲ್ಲಂತೆ ಎಷ್ಟು ಚೆಂದ ಹೇಳ್ತಾನ ನೋಡ? ತಂಗಿ ಬಾ ಬಾರವ್ವ ನಾನು ಹೋರಿ ಒಡೆದು ಓಡುಸ್ತೀನಿ ಬಾ.

[ ಇಬ್ಬರೂ ಹೋಗುವರು. ಹಿಂದಿನಿಂದ ದಾನ ಕೆಂಪಿಯು ಸೆರಗನ್ನು ಹಿಡಿದು ಎಳೆಯುವನು. ಕೆಂಪಿ ದಾನನ ಕೆನ್ನೆಗೆ ಹೊಡೆದು ಹೋಗುವಳು ]

ದಾನ – 　　[ ಕೆನ್ನೆಯನ್ನು ಹಿಡಿದುಕೊಂಡು ]

ಈ ಹೆಣ್ಣು ನಮಗೆ ಅಷ್ಟೊಂದು ಸುಲುಭವಾಗಿ ದಕ್ಕಿದಂಗ ಕಾಣೋದಿಲ್ಲರಿ. ನಮ್ಮ ಮನಿಯಾಗ ನಮ್ಮ ಹೋರಿ ಮಾಡೋದು ನೋಡಿದರೆ ನಮ್ಮ ಮೈಯಾಗ ಒಂದು ನಮೂನಿ ಆಗಕ ಹತ್ತೈತಿ. ಇರ್ಲಿ ಇರ್ಲಿ ನಾವು ನಮ್ಮ ಹೋರಿ ಜೋಡಿ ಕಟ್ಟಾಕ ಮಣಕ ತರೋದರಾಗ ಈ ಹೆಣ್ಣು ನನ್ನಂತೆ ಆಗುವಂಗ ಮಾಡಿಕೊಂತಿನಿ. ನಾನು ಯಾರು ? ನನ್ನ ಹೆಸರೇ ದಾನ. ಈ ಯೌವ್ವನವನ್ನು ಎಲ್ಲರಿಗೂ ದಾನ ಮಾಡುವುದೇ ನನ್ನ ಕೆಲಸ. [ ಹೋಗುವನು ]

## ಪ್ರವೇಶ ೪ [ಮನೆ ಪ್ಲಾಟ್]

[ರವಿಚಂದ್ರನ ಮನೆ. ಕಾಂಚನ ಒಳಗೆ ಇರುವಳು. ಹೊರಗಿನಿಂದ ವಿಶ್ವಚಂದ್ರ ರವಿಚಂದ್ರ ಬರುವರು]

**ರವಿಚಂದ್ರ** – ಕಾಂಚನಾ.... ಕಾಂಚನಾ....

**ಕಾಂಚನಾ** – [ಒಳಗಿನಿಂದ ಬರುತ್ತ] ಏಕೆ ಸ್ವಾಮಿ ಕರೆದಿರಾ ಮನೆಗೆ ಬರಲು ತಡಮಾಡಿದಿರಿ ಇಂದು ?

**ರವಿಚಂದ್ರ** – ಕಾಂಚನ ಇಂದು ನಿನಗೆ ಸಂತೋಷದ ಸುದ್ದಿಯನ್ನು ತಂದಿದ್ದೇನೆ.

**ಕಾಂಚನ** – ಏನು.... ಸಂತೋಷದ ಸುದ್ದಿ!! ಅಂತಹ ಸಂತೋಷದ ಸುದ್ದಿ ಆದಾವುದು ಸ್ವಾಮಿ.

**ರವಿಚಂದ್ರ** – ಇದೋ ನೋಡು ಕಾಂಚನ (ವಿಶ್ವಚಂದ್ರನನ್ನು ತೋರಿಸುತ್ತಾ) ಈತ ನನ್ನ ಬಾಲ್ಯ ಮಿತ್ರ. ಇವನ ಹೆಸರು ವಿಶ್ವಚಂದ್ರ ಈತನು ಇದೇ ಊರಿಗೆ ನಮ್ಮ ಆಸ್ಪತ್ರೆಗೆ F.D.C. ಯಾಗಿ ಕೆಲಸ ಮಾಡಲು ಬಂದಿದ್ದಾನೆ. ಇವನು ನಾನು ಒಂದೇ ತರಗತಿಯಲ್ಲಿ ಓದಿದೆವು ಒಂದೇ ರೂಮಿನಲ್ಲಿ ಇದ್ದೆವು. ಒಂದೇ ತಟ್ಟೆಯಲ್ಲಿ ಊಟ ಮಾಡುತ್ತಿದ್ದೆವು. ಇಲ್ಲಿಯವರೆಗೆ ಒಡಹುಟ್ಟಿದ ಅಣ್ಣ ತಮ್ಮಂದಿರಂತೆ ನಡೆದುಕೊಂಡು ಬಂದಿರುವೆವು. ಮುಂದೆ ಕೂಡ ನಮ್ಮ ಸ್ನೇಹಕ್ಕೆ ಯಾವರೀತಿ ಕುಂದು ಬಾರದಿರಲೆಂದು ಆ ದೇವರನ್ನು ಪ್ರಾರ್ಥಿಸುತ್ತೇನೆ. ವಿಶ್ವಚಂದ್ರ ತುಂಬಾ ಒಳ್ಳೆಯುವನು.

**ಕಾಂಚನ** – ನಮಸ್ಕಾರ!! (ವಿಶ್ವಚಂದ್ರಗೆ ಕೈಮುಗಿಯುವಳು)

**ವಿಶ್ವಚಂದ್ರ** – ನಮಸ್ಕಾರ ಅತ್ತಿಗೆ.

(ವಿಶ್ವಚಂದ್ರ ಕೈಮುಗಿಯುವನು)

**ರವಿಚಂದ್ರ** – ಕಾಂಚನ ಇವನನ್ನು ನೀನು ನಿನ್ನ ಮೈದುನನೆಂದೆ ಭಾವಿಸಬೇಕು. ಇವನ ಮದುವೆ ಇನ್ನು ಆಗಿಲ್ಲ. ಆದಕಾರಣ ಇವನ ಮದುವೆ ಆಗುವವರೆಗೂ ನಮ್ಮ ಮನೆಯಲ್ಲಿಯೇ ಇರುತ್ತಾನೆ. ಇವನ ಮದುವೆಯನ್ನು ನಾವೇ ಮುಂದೆ ನಿಂತು ಮಾಡಬೇಕು. ಇವನ ಹೆಂಡತಿ ಬರುವವರಿಗೂ ನಿನ್ನ ಮೈದುನನಿಗೆ ಊಟ ಉಪಚಾರದಲ್ಲಿ ಒಂದು ಕೊರತೆ ಯಾಗದಂತೆ ನೋಡಿಕೊಳ್ಳುವ ಹೊಣೆ ನಿನ್ನದು. ಏಕೆಂದರೆ ಇವನು ತುಂಬಾ ಸಂತೋಷ ಸ್ವಭಾವದವನು. ಕಾರಣ ನೀನು ಇವನನ್ನು ಸ್ವಂತ ಮೈದುನನೆಂದು ತಿಳಿದುಕೊಳ್ಳಬೇಕು ತಿಳಿಯಿತೆ.

**ಕಾಂಚನ** – [ ವಿಶ್ವಚಂದ್ರನ ಮುಖವನ್ನು ಕಾಂಚನ ನೋಡುವಳು ಅವನು ಕಾಮದೃಷ್ಟಿಯಿಂದ ಅವಳನ್ನೆ ನೋಡುತ್ತಿರುತ್ತಾನೆ ] ಹಾಗೆ ಆಗಲಿ ಸ್ವಾಮಿ. ನನ್ನ ಜೀವನದಲ್ಲಿ ಮೈದುನನೆಂಬ ಶಬ್ದವೇ ಇದ್ದಿಲ್ಲ. ನಿಮ್ಮ ಪ್ರೀತಿಯ ತಮ್ಮನನ್ನು ಕರೆದುಕೊಂಡು ಬಂದದ್ದು ತುಂಬಾ ಸಂತೋಷವಾಯಿತು. ಅದು ಇರಲಿ ನನ್ನ ಮೈದುನನನ್ನು ಕರೆದುಕೊಂಡು ಬಂದ ಸಂದರ್ಭದಲ್ಲಿ ನಿಂತೆ ಮಾತನಾಡುವಿರಲ್ಲ. ಇಷ್ಟು ಹೊತ್ತು ನಿಂತು ನಿಮ್ಮ ಭಾಷಣ ಕೇಳುವಷ್ಟರಲ್ಲಿ ನನ್ನ ಮೈದುನನ ಕಾಲುಗಳು ಸೋತು ಹೋಗಿರಬಹುದು. ಹಾ! ಮೊದಲು ಕುಳಿತುಕೊಳ್ಳಿ. ಹಾಲು ತರುತ್ತೇನೆ. ಹಾಲು ಕುಡಿದು ನಂತರ ಬೇಕಾದಷ್ಟು ಮಾತನಾಡುವಿರಂತೆ. [ ಕಾಂಚನ ಒಳಗೆ ಹೋಗುವಳು ]

**ರವಿಚಂದ್ರ** – ಹೌದು! ಮರೆತುಬಿಟ್ಟಿದ್ದೆ. ಬಾ ವಿಶ್ವ ಮೊದಲು ಕುಳಿತುಕೊ ಬಾ ನನಗೆ ನೀನು ಬಂದಿರುವ ಸಂತೋಷದಲ್ಲಿ ನಿಂತು ಮಾತನಾಡಿದ ಪರಿವೆ ಇಲ್ಲ. ಬಾ ಕುಳಿತುಕೋ ಬಾ.

[ ಇಬ್ಬರು ಕುಳಿತುಕೊಳ್ಳುವರು ]

**ವಿಶ್ವಚಂದ್ರ** – ರವಿ ನೀನು ನನ್ನ ಮೇಲೆ ಅದೆಷ್ಟು ಮಮತೆ ಇಟ್ಟಿರುವಿ. ಈ ನಿನ್ನ ಪ್ರೀತಿ ವಾತ್ಸಲ್ಯವನ್ನು ನೋಡಿದರೆ ನೀನೆ ಏಕೆ

ನನ್ನ ಸಹೋದರನಾಗಬಾರದೆಂದು ನನ್ನ ಮನ ಮಿಡಿಯುತ್ತದೆ. ಒಂದು ವೇಳೆ ಒಂದು ಉದರದಲ್ಲಿ ಜನಿಸಿ ಬಂದ ಸಹೋದರರು ಕೂಡ ಈ ಪ್ರೀತಿ ವಾತ್ಸಲ್ಯ ಇರಲಿಕ್ಕಿಲ್ಲ ನೋಡು.

**ರವಿಚಂದ್ರ** – ಮಿತ್ರ ಸಾಕು ಮಾಡು ನಿನ್ನ ವರ್ಣನೆಯನ್ನು ನಾನು ಹೇಳಿದಂತೆ ನಿನ್ನ ಅತ್ತಿಗೆಯಲ್ಲಿ ಎಂಥಹಾ ಹಿರಿಯ ಗುಣ ಇದೆ ನೋಡಿದಿಯಾ. ಇಷ್ಟೆ ಅಲ್ಲ ಇನ್ನು ಮುಂದೆ ನೋಡುವಿಯಂತಿ ನಿನ್ನ ಅತ್ತಿಗೆಯ ಹೃದಯ ವೈಶಲ್ಯತೆಯನ್ನು.

**ವಿಶ್ವಚಂದ್ರ** – ಇಂಥಹ ಅತ್ತಿಗೆ ನಿನ್ನ ಹೆಂಡತಿಯಾಗಿ ಸಿಕ್ಕಿದ್ದು ನಿನ್ನ ಪೂರ್ವಜನ್ಮದ ಪುಣ್ಯ. ಒಳ್ಳೆಯ ಹೆಂಡತಿಯು ಸಿಗಬೇಕಾದರೆ ಅವನ್ನು ಕೂಡ ಆ ದೇವರಲ್ಲಿ ಪಡೆದು ಬಂದಿರಬೇಕು. ನನ್ನ ಹೆಂಡತಿಯಾಗಿ ಬರುವವಳು ಎಂತವಳು ಸಿಗುವಳೋ ಏನೋ? ಆ ಭಗವಂತನಿಗೆ ಗೊತ್ತು.

**ರವಿಚಂದ್ರ** – ವಿಶ್ವ ನೀನೇಕೆ ಚಿಂತೆ ಮಾಡುವಿ. ನಿನಗೆ ಹೆಂಡತಿಯಾಗಿ ಬರುವವಳನ್ನು ಎಂಥವಳನ್ನು ಹುಡುಕುತ್ತೇನೆ ಗೊತ್ತೆ? ಸೌಂದರ್ಯ ರೂಪ, ಗುಣದಲ್ಲಿ ನಿನ್ನ ಅತ್ತಿಗೆಗಿಂತ ಹತ್ತು ಪಟ್ಟು ಹೆಚ್ಚಿದ್ದವಳನ್ನೇ ಆರಿಸಿ ತಂದು ನಿನ್ನ ಮದುವೆ ಮಾಡುತ್ತೇನೆ. ಅದರ ಬಗ್ಗೆ ನೀನು ಎಳ್ಳಷ್ಟು ಆಲೋಚಿಸಬೇಡ. [ಅಷ್ಟರಲ್ಲಿ ಕಾಂಚನ ಹಾಲು ತೆಗೆದುಕೊಂಡು ಬರುವಳು]

**ಕಾಂಚನ** – ಏನು ನನ್ನ ಮೈದುನ ಮನೆಗೆ ಬರುವುದೊಂದೆ ತಡಾ ಆಗಲೇ ಮದುವೆ ಸಿದ್ಧತೆ ನಡಿಸಿದಿರೊ ಹೇಗೆ. ಮೊದಲು ಅವನಿಗೆ ಸರಿಯಾದ ಕನ್ಯಾ ಸಿಗಬೇಕು. ಆಮೇಲೆ ಅವನ ಯೋಗ್ಯತೆಗೆ ತಕ್ಕಂತೆ ವರದಕ್ಷಿಣೆ ವರೋಪಚಾರ ಮಾಡುವ ಶ್ರೀಮಂತರು ಸಿಗಬೇಕು. ಆವಾಗ ನಾವು ವಿಜೃಂಭಣೆಯಿಂದ ಅವನ ಮದುವೆ ಮಾಡುವುದು, ಇರಲಿ ಮೊದಲು ಹಾಲು ತೆಗೆದುಕೊಳ್ಳಿ, [ಹಾಲು ಕೊಡುವಳು. ವಿಶ್ವ ಕಾಂಚನಳ ಮುಖವನ್ನೇ ನೋಡುವನು]

**ರವಿಚಂದ್ರ** – ಕಾಂಚನಾ! ಉಮಾಚಂದ್ರ ಮತ್ತು ಸುಧಾ ಕಾಣುತ್ತಿಲ್ಲವಲ್ಲ.

**ಕಾಂಚನ** – ಶಾಲೆಯ ಹುಡುಗರು ಈ ದಿನ ಸಿನಿಮಾ ನೋಡಲು ಹೋಗಿದ್ದಾರೆ. ಅವರ ಸಂಗಡ ಇವರು ಕೂಡ ಹೋಗಿದ್ದಾರೆ. [ಅಷ್ಟರಲ್ಲಿ ಮಕ್ಕಳು ಬರುವರು] ಅದೋ ನೋಡಿ ಬಂದೇ ಬಿಟ್ಟರು.

**ಉಮಾಚಂದ್ರ** – ಅಪ್ಪಾಜೀ ಸಿನಿಮಾ ಎಷ್ಟು ಚೆನ್ನಾಗಿತ್ತು ಗೊತ್ತೆ?

**ಸುಧಾ** – ಅಮ್ಮ ನಾವು ನೋಡಿದ ಸಿನಿಮಾದಲ್ಲಿ ಒಬ್ಬ ಕೊಲೆಗಾರ ನಿದ್ದ. ಅವನನ್ನು ನೋಡಿ ನನಗೆ ತುಂಬಾ ಭಯವಾಗಿತ್ತು.

**ರವಿಚಂದ್ರ** – ಯಾವುದಮ್ಮ ಸಿನಿಮಾ ನೀವು ನೋಡಿದ್ದು.

**ಉಮಾಚಂದ್ರ** – ಗಾಂಧಿ ಚಿತ್ರವಪ್ಪ. ಮಹಾತ್ಮಗಾಂಧಿಯವರನ್ನು ನಾಥೂರಾಮ್‌ಗೋಡ್ಸೆ ಎಂಬ ನೀಚನು ಗುಂಡಿಕ್ಕಿ ಕೊಲ್ಲುತ್ತಾನೆ, ಅವನನ್ನು ನೋಡಿ ಭಯ ಪಟ್ಟಿದ್ದಾಳೆ ನಮ್ಮ ಸುಧಾ.

**ರವಿಚಂದ್ರ** – ಏಕೆ ಉಮಾಚಂದ್ರ ಈ ದಿನ ನಿಮ್ಮ ಶಾಲೆ ರಜ ಇರುವುದೆ ?

**ಉಮಾಚಂದ್ರ** – ಇಲ್ಲಪ್ಪ ಗಾಂಧೀ ಚಿತ್ರವನ್ನು ನೋಡುವುದರ ಸಲುವಾಗಿ ಮುಂಜಾನೆ ಶಾಲೆ ರಜಾ ಮಾಡಿದ್ದರು. ಮಧ್ಯಾಹ್ನ ಶಾಲೆ ಇದೆ ಅಪ್ಪಾಜಿ.

**ರವಿಚಂದ್ರ** – ಕಾಂಚನ ಮಕ್ಕಳಿಗೆ ಮೊದಲು ಊಟಕ್ಕೆ ಬಡಿಸು ಹೋಗು. ಶಾಲೆಗೆ ವೇಳೆಯಾಗುತ್ತದೆ. ನಾನು ಅವರನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿ ಶಾಲೆಗೆ ಕಳಿಸಿ ಆಸ್ಪತ್ರೆಗೆ ಹೋಗುತ್ತೇನೆ.

**ಕಾಂಚನ** – ಏಕೆ ನೀವು ಊಟ ಮಾಡುವುದಿಲ್ಲವೇ ?

**ರವಿಚಂದ್ರ** – ನಾನಾಗಲೇ ಊಟ ಮಾಡಿಕೊಂಡು ಬಂದಿರುವೆ ಈ ದಿನ ನನ್ನ ಸ್ನೇಹಿತನ ಮನೆಯಲ್ಲಿ ಮಗನ ಹುಟ್ಟಿದ ಹಬ್ಬ ಇದ್ದ

ಕಾರಣ ಅಲ್ಲಿಯೇ ಊಟ ಮುಗಿಸಿ ಬಂದಿರುವೆ, ಹೋಗು ಮಕ್ಕಳಿಗೆ ಮೊದಲು ಊಟಕ್ಕೆ ಬಡಿಸು. [ಮಕ್ಕಳನ್ನು ಕರೆದುಕೊಂಡು ಒಳಗೆ ಹೋಗುವಳು]

**ವಿಶ್ವಚಂದ್ರ** – ರವಿ! ನಿನ್ನ ಸುಖಿ ಸಂಸಾರವನ್ನು ನೋಡಿ ನನಗೆ ತುಂಬಾ ಸಂತೋಷವಾಯಿತು.

**ರವಿಚಂದ್ರ** – ಇರಲಿ ಬಾರೋ ಮೊದಲು ನೀನು ಸ್ನಾನ ಮಾಡು ನಡೆ. ಆಮೇಲೆ ನಿನ್ನ ಅತ್ತಿಗೆಕಡೆಯಿಂದ ನಿನಗೆ ಬೇಕಾದ ಸಿಹಿಯನ್ನು ಮಾಡಿಸಿಕೊಂಡು ಊಟಮಾಡಿ ವಿಶ್ರಾಂತಿಯನ್ನು ತೆಗೆದುಕೋ. ಏಕೆಂದರೆ ದೂರ ಪ್ರಯಾಣದಿಂದ ತುಂಬಾ ದಣಿದಿರಬಹುದು.

**ವಿಶ್ವಚಂದ್ರ** – ರವಿ ನಾನು ಕೂಡ ನಿನ್ನ ಜೊತೆಯಲ್ಲಿ ಬರುತ್ತಿದ್ದೆನಲ್ಲ.

**ರವಿಚಂದ್ರ** – ಈ ಅವತಾರದಲ್ಲಿ ಬರುತ್ತಿವಿಸೋ. ನಿನ್ನ ಸ್ನಾನ, ಊಟ ಮುಗಿಯಲು ವೇಳೆಯಾಗುತ್ತದೆ. ಈಗಾಗಲೇ ಸಮಯ ಕೂಡ ಆಗಿದೆ ಕಾರಣ ಇದೊಂದು ದಿನ ವಿಶ್ರಾಂತಿಯನ್ನು ತೆಗೆದುಕೊ. ನಾಳೆಯಿಂದ ಇದ್ದೆ ಇದೆಯಲ್ಲ ಆಸ್ಪತ್ರೆಗೆ ಬರುವುದು.

**ವಿಶ್ವಚಂದ್ರ** – ಆಗಲಿ ರವಿ ಊಟ ತೀರಿಸಿ ವಿಶ್ರಾಂತಿಯನ್ನು ತೆಗೆದುಕೊಂಡ ಮೇಲೆ ಪೇಟೆ ಕಡೆ ಸುತ್ತಾಡಿಕೊಂಡು ಬರುತ್ತೇನೆ.
[ಒಳಗಿನಿಂದ ಮಕ್ಕಳು ಶಾಲಾ ಚೀಲದೊಂದಿಗೆ ಅರ್ಚನಾ ಬರುವಳು]

**ಉಮಾಚಂದ್ರ** – ಅಪ್ಪಾಜಿ ಹೊರಡಿ ಶಾಲೆಗೆ ವೇಳೆಯಾಯಿತು.

**ರವಿಚಂದ್ರ** – ಸರಿ ನಡೆಯಿರಿ ಹೋಗುವ. ಅಯ್ಯೋ ಮರೆತೆಬಿಟ್ಟಿದ್ದೆ ಸುಧಾ – ಉಮಾಚಂದ್ರ ಇವರು ಯಾರೆಂದು ತಿಳಿದಿರುವಿ. ಇವರು ನಿಮ್ಮ ಚಿಕ್ಕಪ್ಪ ತಿಳಿಯಿತೆ.

**ಉಮಾಚಂದ್ರ, ಸುಧಾ** – ಚಿಕ್ಕಪ್ಪ ಟಾ.... ಟಾ....

**ರವಿಚಂದ್ರ** – ಹಾ! ಕಾಂಚನ ನಾನಿನ್ನು ಬರುತ್ತೇನೆ. ನಿನ್ನ

ಮದನನನ್ನು ಸ್ನಾನ ಮಾಡಿಸಿ ಆವನು ಬಯಸಿದ ಸಿಹಿ ಮಾಡಿ ಊಟ ಬಡಿಸು ಹಾ! ಬರಲೇ ವಿಶ್ವ.

**ವಿಶ್ವಚಂದ್ರ** – ಹೋಗಿ ಬಾ ರವಿ. [ಮಕ್ಕಳೊಂದಿಗೆ ರವಿಚಂದ್ರ ಹೋಗುವನು. ವಿಶ್ವಚಂದ್ರ ಕಾಂಚನಳನ್ನು ನೋಡುತ್ತಾ ನಿಲ್ಲುವನು]

**ಕಾಂಚನ** – ವಿಶ್ವಚಂದ್ರ ನೀವು ಬಂದಾಗಿನಿಂದಲೂ ನೋಡುತ್ತಿರುವೆ. ನಿಮ್ಮ ನೋಟವೆ ವಿಚಿತ್ರವಾಗಿದೆಯಲ್ಲಾ.

**ವಿಶ್ವಚಂದ್ರ** – ಕಾಂಚನ ನನ್ನ ಕಡೆಗಣ್ಣಿನ ನೋಟದ ಅರ್ಥ ನೀವು ಮಾಡಿಕೊಂಡಿರುವಿರಾ? ನಿಮ್ಮ ಈ ರೂಪ. ನಿಮ್ಮ ಈ ಭಾವ, ನಿಮ್ಮ ಬಾಯಿಂದ ಬರುವ ನುಡಿಮುತ್ತುಗಳನ್ನು ನೋಡಿದರೆ ನಾನೀಗ ಯಾವ ಲೋಕದಲ್ಲಿ ಇರುವೆನೋ ಎಂದೆನಿಸುತ್ತದೆ. ಆದರೂ ನೀನೋರ್ವ ನನ್ನ ಮಿತ್ರನ ಹೆಂಡತಿ ಅದಕ್ಕಾಗಿ ಅಳುಕುತಿದೆ ನನ್ನ ಮನ.

**ಕಾಂಚನ** – ವಿಶ್ವಚಂದ್ರ ನನ್ನ ಕಡೆಗಣ್ಣಿನ ನೋಟದ ನೋಟವನ್ನು ಅರ್ಥ ಮಾಡಿಕೊಳ್ಳಲಾರದಂಥಹ ಮೂರ್ಖ ಹೆಣ್ಣು ನಾನಲ್ಲ. ನಿಮ್ಮ ಈ ಸೌಂದರ್ಯ. ನಿಮ್ಮ ಮುಖದಲ್ಲಿ ಮಿಂಚುವ ಮಂದ ಹಾಸ. ತುಂಬಿ ನಿಂತ ಈ ಗಾಂಭೀರ್ಯ ಮುಖ ಭಾವ ನೋಡಿ ನನಗೆ ನನ್ನ ಹೃದಯದಲ್ಲಿ ಆಸೆ ಆಕಾಂಕ್ಷೆಗಳು ಹುಟ್ಟುತ್ತಿವೆ.

**ವಿಶ್ವಚಂದ್ರ** – ಕಾಂಚನ ನಿನ್ನ ಹೃದಯದಲ್ಲಿ ಹುಕ್ಕಿ ಬರುವ ಆಸೆ ಆಕಾಂಕ್ಷೆಗಳಿಗೆ ನೀನು ಮೆಚ್ಚುಗೆಯನ್ನು ಕೊಟ್ಟರೆ ನನ್ನ ಹೃದಯ ಮಂದ ಹಾಸದಿಂದ ನಿನ್ನಾಸೆಯನ್ನು ಪೂರೈಸುವೆ.

**ಕಾಂಚನ** – ವಿಶ್ವಚಂದ್ರ ನನ್ನ ಹೃದಯವನ್ನು ಅರ್ಥಮಾಡಿಕೊಂಡು ನನ್ನ ಮನೋಬಯಕೆಯನ್ನು ಈಡೇರಿಸುವಂಥಹ ಒಬ್ಬ ಗಂಡು ದೊರಕಿರಲಿಲ್ಲ ಇಲ್ಲಿಯವರೆಗೆ. ಏಕೆಂದರೆ ಸಾಕಷ್ಟು ಸಿರಿ ಸಂಪತ್ತು ಇದು

ವಿಧ್ಯಾವಂತ ಪತಿ ಇದ್ದರು ಮನೆಯಲ್ಲಿ ಮಡದಿಯ ಮನೋಬಯಕೆಯನ್ನು ಅರ್ಥಮಾಡಿಕೊಳ್ಳುವಷ್ಟು ಸಮಯವಿಲ್ಲ ನನ್ನ ಪತಿಗೆ. ಹೀಗಾಗಿ ನೆಮ್ಮದಿ ಇಲ್ಲದಾಗಿದೆ ನನ್ನ ಜೀವನ.

ವಿಶ್ವಚಂದ್ರ – ಕಾಂಚನ ನಿಮ್ಮ ಸುಂದರ ಬಾಳಿನಲ್ಲಿ ಇಷ್ಟೊಂದು ಕಹಿ ಇದೆಯೆಂದು ನಾನು ಭಾವಿಸಿರಲಿಲ್ಲ. ನೀನು ನಿನ್ನ ಪತಿಯ ವಿಚಾರ ದಲ್ಲಿ ಇಷ್ಟೊಂದು ಜಿಗುಪ್ಸೆ ಹೊಂದಿರುವಳೆಂದು ನಾನು ತಿಳಿದಿರಲಿಲ್ಲ,

**ಕಾಂಚನ** - ವಿಶ್ವಚಂದ್ರ ನನ್ನ ಪತಿಯ ಅಂತರಾಳದ ಗುಣಧರ್ಮಕ್ಕೆ ನಿನ್ನ ಮನೋಧರ್ಮದ ಗುಣಧರ್ಮಕ್ಕೂ ಸಾಕಷ್ಟು ಅಂತರವಿರುವುದು. ಇಂದಿಗೆನನ್ನ ಮದುವೆಯಾಗಿ 12 ವರ್ಷಗಳಿಸಿದವು. ಆದರೆ ಇಂದಿನವರೆಗೂ ಅವರೊಂದಿಗೆ ಮೈ ಬೆರಸಿದೆ ವಿನಹಾ ಮನವು ಮಾತ್ರ ಬೆರೆತಿಲ್ಲ. ಕಾರಣ ಅವರನ್ನು ಮಾಡಿಕೊಂಡ ಕರ್ಮಕ್ಕೆ ಅವರೊಂದಿಗೆ ಬಾಳು ಸಾಗಿಸುತ್ತಿ-ರುವೆ. ನನ್ನ ಪತಿದೇವರಿಗೆ ನನ್ನ ಪ್ರೀತಿಗಿಂತಲೂ ಅವರ ವೃತ್ತಿಯಲ್ಲಿ ಆಸಕ್ತಿ ಹೆಚ್ಚು ಅವರಿಗೆ. ಹೀಗಾಗಿ ನನ್ನ ಆಸೆ ಆಕಾಂಕ್ಷೆಗಳು ನಸಿಸಿ ಹೋಗಿವೆ ಆದರೆ ಇಂದು ನೀವು ಬಂದು ನನ್ನ ಬಾಳಿಗೆ ಹೊಸ ಚೈತನ್ಯವನ್ನೆ ನೀಡಿದಿರಿ.

**ವಿಶ್ವಚಂದ್ರ** – ಅಯ್ಯೋ ಪಾಪ ನಿಮ್ಮನ್ನು ಈ ರೀತಿ ಕೊರಗಿಸ ಬಾರದಾಗಿತ್ತು. ಹೆಣ್ಣಿನ ಮನೋಧರ್ಮಗಳನ್ನು ಅರ್ಥಮಾಡಿಕೊಂಡು ಅವಳಿಗೆ ನೆಮ್ಮದಿಯ ಜೀವನ ನೀಡುವಂಥಹ ಹೃದಯವಂತಿಕೆಯುಳ್ಳ ಗಂಡನಾಗಿಬೇಕು. ರವಿಯು ಈ ರೀತಿ ನಿಮಗೆ ಅನ್ಯಾಯ ಮಾಡಬಾರ-ದಾಗಿತ್ತು. ಅವನು ವಿಧ್ಯಾವಂತ ಮೇಲಾಗಿ ಡಾಕ್ಟರ್, ಈ ರೀತಿ ನಿನಗೆ ಅನ್ಯಾಯ ಮಾಡಿದ್ದು ತುಂಬಾ ಅನ್ಯಾಯ.

**ಕಾಂಚನ** – ವಿಶ್ವಾ! ರವಿ ಎಷ್ಟೇ ವಿಧ್ಯಾವಂತ ಡಾಕ್ಟರ್ ಆಗಿದ್ದರು ಅದು ವ್ಯರ್ಥ ಏಕೆಂದರೆ ಈ ವಿದ್ಯಾವಂತಿಕೆಗೂ ಆ ಸುಖದಾ-

ನಕ್ಕೆ ಸಾಕಷ್ಟು ಅಂತರವಿರುವುದು. ಅದನ್ನು ಅರಿಯುವಷ್ಟು ಜ್ಞಾನಿ ಅಲ್ಲ ನನ್ನ ಪತಿ. ವಿಶ್ವಚಂದ್ರ ನೀವು ಈ ಕೆಲಸ ಮಾಡಲು ಬಂದದು ತುಂಬಾ ಅನುಕೂಲವಾಯಿತು. ಮುಂದಿನ ನನ್ನ ನೆಮ್ಮದಿಯ ಜೀವನಕ್ಕೆ ದಾರಿಯಾಯಿತು. ನಮ್ಮ ಪ್ರಣಯ ಜೀವನಕ್ಕೆ ಯಾವ ತೊಂದರೆಯೂ ಇಲ್ಲ. ಸಮಾಜ ದೃಷ್ಟಿಯಲ್ಲಿ ನಾವಿಬ್ಬರು ಅತ್ತಿಗೆ ಮೈದುನರಾಗಿಯೇ ಕಾಲ ಕಳೆಯೋಣ. ಆದರೆ ಅಂತರಂಗದಲ್ಲಿ ನಾವಿಬ್ಬರೂ ರಸಿಕತೆಯ ಮಡಿಲಲ್ಲಿ ಮುಳುಗಿ ತೇಲೋಣ.

ವಿಶ್ವಚಂದ್ರ – ಕಾಂಚನ! ನಿನ್ನ ಒಪ್ಪಿಗೆಗೆ ನನ್ನ ಒಪ್ಪಿಗೆ ಇದೆ. ಆದರೆ ನನ್ನ ಮಿತ್ರ ರವಿ ಅಲ್ಲಲ್ಲ ನಿನ್ನ ಪತಿದೇವರಿಗೆ ನಮ್ಮ ಈ ಅನೈತಿಕ ಸಂಬಂಧ ಗೊತ್ತಾದರೆ ನಾವು ಈ ಲೋಕವನ್ನು ತೊರೆಯ ಬೇಕಾಗುತ್ತದೆ ಸ್ವಲ್ಪ ಆಲೋಚನೆಯನ್ನು ಮಾಡಿನೋಡು.

ಕಾಂಚನ – ವಿಶ್ವ! ಆ ಭಯವನ್ನೇ ನೀನು ನಿನ್ನ ಮನದಲ್ಲಿ ತಂದು ಕೊಳ್ಳಬೇಡ. ರವಿಯು ನಮ್ಮಿಬ್ಬರ ಈ ಸಂಬಂಧವನ್ನು ತಿಳಿಯುವಂತಹ ತೀಕ್ಷ್ಣಬುದ್ಧಿಯಿಲ್ಲ ಮೇಲಾಗಿ ಧೈರ್ಯವಂತನೂ ಅಲ್ಲ. ಇವರ ಬಗ್ಗೆ ನೀನು ಎಳ್ಳಷ್ಟು ಚಿಂತಿಸಬೇಡ. ಇದಕ್ಕೂ ಮೀರಿದಲ್ಲಿ ನಾವಿಬ್ಬರೂ ಅವನ ಎದುರಲ್ಲಿ ಸುಖ ಜೀವನ ಕಳೆಯೋಣ ಅವನನ್ನು ದೂರ ಮಾಡಲು ನಾನೊಂದು ನಿರ್ಧರಿಸಿದ್ದೇವೆ.

ವಿಶ್ವಚಂದ್ರ – ಛೀ. ಛೀ. ಈಗಲೇ ಅಂತಹ ನಿರ್ಧಾರವನ್ನು ಕೈ ಕೊಳ್ಳುವುದು ಬೇಡ. ಈ ನಮ್ಮ ಪ್ರಣಯ ಸಂಬಂಧ ಹೀಗಿಯೇ ಗೌಪ್ಯವಾಗಿ ನಡೆದಲ್ಲಿ ನೀನು ನಿರ್ಧಾರ ಮಾಡಿದಂತೆ ನಾನು ನಿರ್ಧಾರ ಮಾಡಲು ಬರುವಂತಿಲ್ಲ. ಏಕೆಂದರೆ ರವಿಯು ನಾನು ಬಾಲ್ಯ ಸ್ನೇಹಿತರು ಆತ್ಮೀಯತೆ ಯಿಂದ ಬೆಳೆಯ ಬಂದಿದ್ದೇವೆ. ಈ ನಮ್ಮ ಅನೈತಿಕ ಸಂಬಂಧ ಗೊತ್ತಾ ದಲ್ಲಿ ನಿನ್ನ ಜೀವಂತ ಉಳಿಯುವುದಿಲ್ಲ. ಸಮಾಜದ ದೃಷ್ಟಿಯಲ್ಲಿ ನಾವು ನನ್ನ ಮನೋಜ... ಅದಕ್ಕಾಗಿ ಕೊನೆಯವರಿಗೂ ಹೀಗೆಯೇ ಗುಪ್ತವಾಗಿ ಇರಲಿ ನಿಲ್ಲಿಯುವರೆಗೆ... ಪ್ರಣಯ ಸಂಬಂಧ.

**ಕಾಂಚನ** – ವಿಶ್ವಾ! ಈ ನಮ್ಮ ಪ್ರಣಯ ಸಂಬಂಧ ಹೀಗೆ ಸಾಗುವದೋ ಅಥವಾ?

**ವಿಶ್ವಚಂದ್ರ** – ಛೇ! ಅನುಮಾನವೇ ಇಲ್ಲಾ. ನಮ್ಮ ಜೀವನ ಅಂತ್ಯದವರೆಗೂ ಎಂದೆಂದು ಈ ಸುಮವನ್ನು [ಕಿನ್ನಿಯನ್ನು ಮುಟ್ಟುವನು] ನನ್ನ ಹೃದಯ ಮಂದಿರದಲ್ಲಿಟ್ಟು ಬಾಡದಂತೆ ನೋಡಿಕೊಳ್ಳುತ್ತೇನೆ.

**ಕಾಂಚನ** – ಈ ಅರಳಿದ ಸುಮಧ ಸುಧೆಯನ್ನು ಹೀರುವ ದುಂಬಿಯೇ ನೀವಾಗಿರುವಾಗ ಎಂದೆಂದು ಈ ಸುಮವು ಈ ದುಂಬಿಯ ಅನುಕಂಪವನ್ನೇ ಹಂಬಲಿಸುತ್ತದೆ.

**ವಿಶ್ವಚಂದ್ರ** – ಈ ದುಂಬಿಯು ಆಗಮನವನ್ನೆ ಸುಮವು ಕಾಯು-ತ್ತಿರುವಾಗ ಆ ಸುಮದ ಸುಧೆಯ ರಸದೌತಣವನ್ನು ಮಾಡಿ ಆನಂದ ಸಾಗರದಲ್ಲಿ ತೇಲಾಡಿಸುವೆ,

**ಕಾಂಚನ** – ನಮ್ಮ ಈ ಮನ ಒಂದಾದಂಡೆ.

**ವಿಶ್ವಚಂದ್ರ** – ನನ್ನ ನಿನ್ನ ಹೃದಯ ಬೆರತಂತೆ.

**ಕಾಂಚನ** – ಸುಖದ ಸ್ವಪ್ನ ನಾ ಕಂಡಂತೆ

**ವಿಶ್ವಚಂದ್ರ** – ಕಂಡ ಕನಸು ನನಸಾದಂತೆ.

**ಕಾಂಚನ** – ಸಾಗಲಿ ನಮ್ಮ ಪ್ರೇಮಸಾಗರದ ಅಲೆಯಂತೆ,

— ಹಾಡು —

ಗಂಡು – ಸುಪ್ರಭಾತ ಸುಂದರಿ ।
ಅರುಣರಾಗ ಮಂಜರಿ ।
ಚೆಲು ಮೊಗದ ಮಾಧುರಿ ॥
ಸುರ ಸೌಖ್ಯದಾ ಸಿರಿ ॥

ಹೆಣ್ಣು – ಸ್ವಪ್ನ ಲೋಕ ಸುಂದರ ।
ನೀ ಬಾಳಿಗೆ ಆಸರ ।

ಚಲುವು ಒಳಿವು ನಿನ್ನ ಆಗರ ।
ಶೃಂಗಾರ ಸಾಗರ ॥

ಹೆಣ್ಣು – ಮಧುಮಾಸ ಚೈತ್ರದಂತೆ ।
ಕೋಗಿಲೆಯು ಕಾಣದಂತೆ ॥

ಗಂಡು – ಮಧು ಮಧುರ ಜೀವನವು ।
ನವಭಾವ ಗೀತೆಯಂತೆ ॥

ಹೆಣ್ಣು – ಗೀತೆ ಸಂಗೀತವಾಗಿ ।
ರಾಗ ಅನುರಾಗವಾಗಿ ।
ಶೃತಿ ಬೆರೆದ ಗಾನದಂತೆ ।
ಬಾಳೋಣ ಹಾಯಾಗಿ ॥

**ಕಾಂಚನ** – [ ಹಾಡು ಮುಗಿದ ನಂತರ ] ಬನ್ನಿ ಮೊದಲು ಸ್ನಾನ ಮಾಡಿ ಊಟ ಮಾಡುವಿರಂತೆ.

**ವಿಶ್ವಚಂದ್ರ** – ಕಾಂಚನ ಸಧ್ಯ ನನಗೆ ಊಟ ಬೇಡ. ಸ್ನಾನ ಬೇಡ ಈ ನಿನ್ನ ಆನಂದದ ಅಪ್ಪುಗೆಯಲ್ಲಿ ಈ ದಣಿವ ಹೃದಯವು ನಿನ್ನ ಸುಖದ ಸೋಪಾನ ಬಯಸುತ್ತದೆ. ತಡ ಮಾಡದೆ ನಡೆ ಒಳಗೆ. ಕಾತರಿಸುತಿಹ ಈ ಮನಕೆ ನಿನ್ನ ಮಡಿಲ ಮಂದಿರದಲ್ಲಿ ಮಹದಾನಂದ ನೀಡಿ ನನ್ನನ್ನು ತೃಪ್ತಿ ಪಡಿಸು.

**ಕಾಂಚನ** – ಈ ದಣಿದ ಹೃದಯಕ್ಕೆ ಕಂಪನೀಯಲು ಕಾತರಿಸುತ್ತಿದೆ ಮನ ಬನ್ನಿ ಒಳಗೆ.

## ಪ್ರವೇಶ ೫ [ಜಂಗಲ್ ರಸ್ತಾ]

[ಕೆಂಪಿ ಪದ ಹಾಡುತ್ತಾ ಬರುವಳು]

**ಕೆಂಪಿ** – ಅಲ್ಲಾ ಈ ದಾನ ನಾನೆಷ್ಟು ಹೇಳಿದರು ತನ್ನ ಹೋರಿ ತಂದು ನಮ್ಮ ಆಕಳ್ಳ ಹಿಂಡಿನ್ಯಾಗ ಹೋಗುಸ್ತಾನಲ್ಲ. ಇವನಿಗೆ ಏನು ಮಾಡಬೇಕು ಅಂತೀನಿ. ನಮ್ಮಣ್ಣರಾ ಅವನ ಹೋರಿಗೆ ಸರಿಯಾದ್ದ ಮಣಕನ ಕೊಡಿಸವಲ್ಲ. ಅವನ್ನ ನೋಡಿದರೆ ನಿಮ್ಮ ಅಣ್ಣ ಮಣಕನ ಕೊಡಿಸ್ತೋತನಕ ನಿಮ್ಮ ಆಕಳ ದನದಾಗ ನಮ್ಮ ಹೋರಿ ಇರ್ಲಿ ಅಂತಾ ಹಟ ತೊಟ್ಟು ನಿಂತಾನ. ತಿಳಿದು ನೋಡಿದರ ದಾನನ ವಿಚಾರನೂ ಕರೆಕ್ಟ್ ಐತಿ. ಯೌವ್ವನ ತುಂಬಿದ ಮೇಲೆ ದನ ಏನು? ಜನ ಏನು? ಅದನರಿತು ಮನೆಯ ಯಜಮಾನ ಆದಾವ ಅವುಗಳ ಜೋಡಣೆ ಮಾಡಿದರ ಸರಿಯಾಗಿ ಸಾಗತೈತಿ ಜೋಡು ಎತ್ತಿನ ಬಂಡಿ. ಇಲ್ಲಂದ್ರ ಅದನ್ನ ತಿಳಿದು ತಿಳಿದು ಸುಮ್ಯಾನ ಬಿಟ್ಟುರಾ ಎತ್ತಿನ ಜೊತಿಗೆ ಕೋಣನ್ನ ಬಂಡಿಗೆ ಹೂಡಿದಂಗ ಆಗತೈತಿ ನೋಡ್ರಿ ನಮ್ಮ ಬಾಳೇವು. ನಮ್ಮ ಅಣ್ಣ ನನ ಬಗ್ಗೆ ಸ್ವಲ್ಪಾದರೂ ವಿಚಾರ ಮಾಡುವಲ್ಲ. ಬರೆ ದಲಾಲಿ ಮಾಡಿ ಗಳಿಸೋದರಾಗ ಸಾಯಿತಾನ. ತನ್ನ ತಂಗಿ ವಯಸ್ಸಿಗೆ ಬಂದಾಳ ಅನ್ನುವ ವಿಚಾರ ಸ್ವಲ್ಪಾದರು ಇಲ್ಲ, ನನಗೂ ಅ ದಾನ ಮಾಡೋದು ನೋಡಿ ಒಂದು ನಮೂನಿ ಆಗಕ ಅತೈತಿ ಮೈಯಾಗ. ಅವನು ಬಾಳ ಬೆರಕಿ ಅವಾದ. ನನ್ನ ನೋಡಿದ ಅಂದ್ರು ಏನ ಅವನ ಆಟ. ಹಲ್ಲಿಗೆ ಹಲ್ಲು ಕಡಿತಾನ. ಮೂಗಿಗೆ ಮೂಗ ಮುರಿತಾನ. ಕಣ್ಣು ಹೊಡಿತಾನ ಎಷ್ಟು ಜನ ಇದ್ರು ಕೂಡ ಅದರ ಕಬರ ಇಲ್ಲದಂಗ ನನ್ನ ತಡವಾಕ ಬರತಾನ, ಅವನ ಗಂಭೀರ ಗಂಡಸಾ! ಅವನ ಆಟನ್ನೆಲ್ಲಾ ನೋಡಿ ನನಗೂ ಒಂದು ನಮೂನಿ ಜುಂ. ಜುಂ, ಜುಂ. ಜುಂ, ಅನ್ನಾಕ ಹತ್ತೈತಿ. ಇದಕ ಏನ ಮಾಡಬೇಕು ಅಂತಾ ?

**ದಾನ** - [ ದಾನ ಬರುವನು ] ಏನ ಮಾಡಬೇಕಂತ ಮಾಡಿ ಕೆಂಪಿ ನಮ್ಮ ಹೋರಿ ಕಾಲ್‌ಗೀಲ್ ಮುರಿಬೇಕಂತ ಮಾಡಿಯೋನ.

**ಕೆಂಪಿ** – ಬಿಡತಾರ ಏನ್ ಕಾಲ್‌ಗೀಲ್ ಮುರಿಬೇಕಂದ್ರ ಅದು ಕೈಗೆ ಸಿಕ್ಕರಲ್ಲ. ಯಾಕಂದ್ರ ಅದು ನೀ ಸಾಕಿದ ಹೋರಿ ನೋಡು. ಈಗ ಸದ್ಯ ನೋಡಿದ್ರ ಆ ಹೋರಿಗಿಂತ ನಿನ್ನ ಹುರುಣಗಿನಾ ಹೆಚ್ಚಾಗ್ಯೆತಿ ನೋಡು,

**ದಾನ** – ಅಂದ್ರ ನನ್ನ ಕಾಲನ ಮುರಿಸಬೇಕಂತ ಮಾಡಿ ಅಂದಂಗಾತು.

**ಕೆಂಪಿ** – ನಿನ್ನ ಕಾಲ ಮುರುಸೋದಕ್ಕಿಂತ ನಿನ್ನ ಸೊಂಟಾ ಮುರಿಸಿ ನಮ್ದು ಗ್ವಾದ್ಲಿಗೆ ಕೆಡುವ ಬೇಕು ನೋಡು ನಿನ್ನ.

**ದಾನ** – ಅಲ್ಲಾ ಕೆಂಪಿ ನನ್ನ ಸೊಂಟಾ ಮುರಿಸಿ ನಿನ್ನ ಗ್ವಾದ್ಲಿಗೆ ಕೆಡವಿದಿ ಅಂದ್ರ ನಿನ್ನ ಗ್ವಾದ್ಲಿ ಗತಿ ಏನಾದೀತು. ನಿನ್ನ ಗತಿ ಏನಾದೀತು.

**ಕೆಂಪಿ** – ಯಾಕೋ ದಾನ ನನ ಗತಿ ಏನ ಆಗ್ತೈತಿ ಅಂತ ಕೇಳತಿ ಏನೋ? ನಿನ್ನ ಹಂದಿ ಚರ್ಮ ಸುಲಿಸಿದಂಗೆ ಸುಲಿಸಿಬಿಟ್ಟೇನು. ನಾನಾರು ದಲಾಲಿ ಧರ್ಮಣ್ಣನ ತಂಗಿ ಕೆಂಪಿ ಅಂದ್ರ ಏನಂತಾ ತಿಳದುಕೊಂಡಿ. ಹಿಂದೆ ನಿನ್ನ ಕಣ್ಣ ಕೆಂಪಾಗಿದ್ದು ಮರತಿಯೇನು ?

**ದಾನ** – ಏ ಕೆಂಪಿ. ಕಣ್ಣ ಕೆಂಪಾದರೇನು ? ಮೈ ಹಣ್ಣಾದರೇನು? ಹಣ್ಣಾದ ಮೈಗೆ ಏಣ್ಣಿ ಹಚ್ಚಿ ಮೈ ನೀಯಾಕ ಬಂದು ನಿಟ್ಟಿದ ಹೆಣ್ಣು ಬೇಕಲ್ಲ.

**ಕೆಂಪಿ** – ಮೆಚ್ಚಿ ಬರಬೇಕಲ್ಲ ನಿನ್ನ ಮುಖಕ ಹೆಣ್ಣು!!

**ದಾನ** – ಬಂದು ಹೆಣ್ಣು ಮೆಚ್ಚಿ ಬರದಂತ ಹುಚ್ಚ ಗಂಡಸೇ ನಾನು

**ಕೆಂಪಿ** – ಏನ ನಾನು ಹುಚ್ಚ ಗಂಡಸು ಅಂತ ನನ್ನ ಕೇಳತಿಯಿಲ್ಲ. ನಿನ್ನ ಘೋರಿ ನೆಪ ಮಾಡಿಕೊಂಡು ನನ್ನ ಹಿಂದೆ ತಿರುಗೋದು ನೋಡಿದರ ನೀನು ಯಾವ ಹುಚ್ಚರಿಗಿ ಕಡಿಮೆ ಅದಿಯಾ.

**ದಾನ –** ಲೇ ಕೆಂಪಿ ನಿನ್ನ ಸಲುವಾಗಿ ನಾನು ತಿರುಗುತೀನಿ ಅಂಬೋದು ನೀನು ಅಷ್ಟಾದರೂ ತಿಳಿದುಕೊಂಡಿಯಲ್ಲಾ. ನೀನು ಅಷ್ಟು ತಿಳಕೊಂಡಿ ನಾನು ಉಳುಕೊಂಡೆ.

ಕೆಂಪಿ – ಏ ದಾನ ನೀನು ಉಳುಕೊಂಡಿ ಅದು ನನಿಗೆ ಗೊತ್ತೈತಿ. ಯಾಕಂದ್ರ ಇನ್ನೊಂದು ಕೆನ್ನೆ ಖಾಲಿ ಉಳಿದೈತ ಅಲ್ಲ ಅದೊಂದು ಕೆನ್ನೆ ಕೆಂಪಾಗಂಗ ತಟ್ಟಿದರ ಗೊತ್ತಾಕತಿ.

**ದಾನ –** ಏ ಕೆಂಪಿ ಎರಡು ಕಡೆ ಕೆನ್ನೆಗಾದರೇನೆ ಮನಸ್ಸಿಗೆ ತಂಪಾಗದು. ಈ ಕೆನ್ನೆ ಕೆಂಪಾಗುವ ಸುಖ ನೀನೇನು ಕಂಡಿಯೇ ಅದು ಅನುಭವಿಸಿದವರಿಗೆ ಗೊತ್ತು.

**ಕೆಂಪಿ –** ಏ ದಾನ, ಏನ ಭಂಡಗೆಟ್ಟ ಮಾತಾಡತಿಯಾ ಅಲ್ಲಾ ನಾನು ನಿನ್ನ ಕೆನ್ನೆ ಕೆಂಪಾಗಂಗ ಹೊಡದರ ಇನ್ನು ತಂಪು ಬಗುಸ್ತಿಯಲ್ಲಾ ನಿನಗೆ ತಟುಗರ ಐತಿ ಏನ.

**ದಾನ –** ಏನ

**ಕೆಂಪಿ –** ನಾಚಿಕೆ.

**ದಾನ –** ತಟಗ್ಯಾಕ ಪೂರ್ತಿ ಐತಿ. ಆದ್ರ ನಾವು ಅದನ್ನು ಸಂದರ್ಭ ನೋಡಿ ಬಳಸತೀವಿ. ಅಲ್ಲ ಕೆಂಪಿ ನಿನ್ನ ಮುಂಜ ಯಾತರದ ನಾಚಿಕಿ.

**ಕೆಂಪಿ –** ಯಾಕ ನಾನೇನು ನಿನ್ನ ಸ್ವಾದರ ಸೊಸೆ ಏನ.

**ದಾನ –** ಆಗದಿದ್ರ ಏನಾಯಿತು. ಮೆಚ್ಚಿದ ಹೆಣ್ಣಿನ ಕೂಡ ಮನಸಬಿಚ್ಚಿ ಮಾತಾಡಕ ಸ್ವಾದರ ಸ್ವಸ್ತ್ರಿ ಬೇಕೇನ.

**ಕೆಂಪಿ –** ಯಾಕ ದಾನ ನಾನೇನು ನಿನ್ನ ಮೆಚ್ಚಿದ ಹೆಣ್ಣೇನು? ಅಲ್ಲಾ ನಿನ್ನ ಮೆಚ್ಚಿದ ಹೆಣ್ಣಿನ ಕೂಡ ಪಂಟ ಹೊಡೆದರ ಸುಖಸರ ಸಿಕ್ಕೀತು ಸುಮ್ನ ನನಿಗ್ಯಾಕ ಮುಖ ಹತ್ತಿ.

**ದಾನ –** ಅಲ್ಲ ಕೆಂಪಿ ನೀನು ಮೆಚ್ಚದಿದ್ರ ಏನಾಯ್ತು. ಆದರೆ ನೀನು ನನಿಗೆ ಮೆಚ್ಚಿದ ಹೆಣ್ಣು ನೋಡು, ನೀನು ಏನ ಮಾಡಿದರು ನಿನ್ನ ಆಕಳ

ಹಿಂದಿನ್ಯಾಗ ನಮ್ಮ ಹೋರಿ ಕಲೆಬಿದ್ದಾಂಗ ನೋಡು ನಾನು. ನಾನು ಮಾತ್ರ ನಿನ್ನ ಬಿಡದಿಲ್ಲ.

**ಕೆಂಪಿ** – ಅವ್ವಾ! ಇಷ್ಟು ಧೈರ್ಯನ ನಿನಗೆ. ಅವತ್ತು ನಮ್ಮ ಅಣ್ಣನ ಎದುರಿಗೆ ನೋಡಿದ್ರ ನಿನ್ನ ಹೋರಿ ಹೊಡಕೊಂಡು ಹೋಗದಿಲ್ಲ ಅಂದಿ. ಇವತ್ತು ನೋಡಿದ್ರ ನಿನ್ನ ಬಿಡೋದಿಲ್ಲ ಅಂತಿ. ಇದನ್ನೆಲ್ಲ ನೋಡಿದ್ರ ನಮ್ಮನಿ ಅಡ್ಗಿಮನಿ ಮಜ್ಗಿ ಕಂಬಕ್ಕ ಕೈಯಾಕಿದಂಗ ಕಾಣತೈತಿ ನೀನು.

**ದಾನ** – ಕೆಂಪಿ ಆ ಮಜ್ಗಿ ಕಂಬ ಇದ್ರನ ಮಜ್ಗಿ ಕಟಿಯಾಕ ಬರೋದು ಅದು ಇಲ್ಲ ಅಂದ್ರ ಇನ್ನು ಬೆಣ್ಣಿ ಎಲ್ಲಿಂದ ಬರತೈತಿ. ತುಪ್ಪಾ ಎಲ್ಲಿಂದ ಆಕೈತಿ.

**ಕೆಂಪಿ** – ಅಲ್ಲಾ ದಾನ ತುಪ್ಪಾ ಬೇಕಾದವರೆಲ್ಲಾ ಮಜ್ಗಿ ಕಟದ ಉಣತಾರ. ಏನ ಬೇಕಾದಂಗ ತುಪ್ಪಾ ಅಂಗಡ್ಯಾಗ ಸಿಗತೈತಿ. ತಂದು ಉಣತಾರ.

**ದಾನ** – ಕೆಂಪಿ ಹಾಲು ಕೆಂಪ್ರ ಆಗುವವರೆಗೂ ಕಾಸೀ ಕೆನೆ ಬರುವ ತನಕ ಬಿಟ್ಟು ಅದಕ್ಕ ಹೆಪ್ಪ ಹಾಕಿದ ಮೇಲೆ ಅದರ ಮೊಸರನ ಮಜ್ಜಿಗೆ ಕಟುದು ತಗದು ಬೆಣ್ಣಿ ತುಪ್ಪದ ರುಚಿನ ಬ್ಯಾರೆ. ಈ ಡಬ್ಬಿ ತುಪ್ಪದ ರುಚಿನಾ ಬ್ಯಾರೆ. ಆ ವಿಚಾರ ನಿನಗೆ ಈಗ ತಿಳಿಯುದಿಲ್ಲ ಏನ? ಮುಂದ ತಾನ ತಿಳಿತೈತಿ.

**ಕೆಂಪಿ** – ಏ ದಾನ ಇಷ್ಟೊಂದು ಮಾತಾಡ್ತಿಯಲ್ಲಾ ನಿನ್ನ ಮನಸಿನ್ಯಾಗ ಇರದಾವ್ರು ಏನು ಏಳು? ಹಿಂಗ ಸುಮ್ನ ಸುತ್ತು ಬಳಿಸಿ ಮಾತನಾಡಬ್ಯಾಡ.

**ದಾನ** - ನೋಡು ಕೆಂಪಿ ನನ್ನ ಮನಸಿನ್ಯಾಗಿದ್ದುದ್ದು ಹೇಳಿಬಿಡಲಿ ಹೌದಲ್ಲ.

---

**ಕೆಂಪಿ** - ತಡಾನ ಮಾಡಬೇಡ ಅದೇನು ಹೇಳ್ಬಿಡು. ನಿಂದು ನೋಡಿ ನೋಡಿ ನನಗೂ ಸಾಕಾಗಿ ಹೋಗ್ಯೆತಿ.

**ದಾನ** – ನೀನು ಇಷ್ಟು ಗಟ್ಟಿ ಆದ ಮೇಲೆ ನಾಯಾಕ ತಡ ಮಾಡಲಿ ನೋಡು ಕೆಂಪಿ ನಾನಂತು ನಿನ್ನ ಮೆಚ್ಚಿಕೊಂಡಿನಿ. ನೀನು ನನ್ನ ಮೆಚ್ಚಿಗೊಂಡಿ ನಾನು ಉಳಕೊಂಡೆ ಇಲ್ಲದಿದ್ರ ನಾನು ಮುಂದಿನ ಊರು ದಾರಿ ಕಂಡೆ.

**ಕೆಂಪಿ** – ಏ ದಾನ ಮುಂದಿನ ಊರು ದಾರಿ ನೀಯಾಕ ಒಡಿತಿಯಾ ನೀನು ನನ್ನ ಮೆಚ್ಚಿಕೊಂಡ ಅಂದ ಮೇಲೆ ನಾನು ನಿನ್ನ ಮೆಚ್ಚಿಕೊಂಡೀನಿ.

**ದಾನ** – ಹೌದ! [ಅಂದು ಕೇಕೆ ಹಾಕುವನು]

**ದಾನ** – ಮನಸು ಮನಸು ಒಂದಾದ ಮೇಲೆ ಮತ್ಯಾಕ ತಡಾ ಮದುವಿ ಹಂದ್ರ ಹಾಕಿಸಿ ಬಿಡೋನಲ್ಲ.

**ಕೆಂಪಿ** – ಅಯ್ಯ ಹಂಗಂದ್ರ ಹ್ಯಾಂಗ ಇದಕ ನಮ್ಮಣ್ಣನ ಒಪ್ಪಿಗೆ ಬೇಕಲ್ಲ.

**ದಾನ** – ಅಲ್ಲಾ ಕೆಂಪಿ ಮಾಡಿಕೊಳ್ಳಾಕಿ ನೀ ಒಪ್ಪಿದ ಮ್ಯಾಲೆ ನಿಮ್ಮಣ್ಣ ಯಾಕ ವಪ್ಪೋದಿಲ್ಲ. ಬಾ ಬಾ ನಿಮ್ಮಣ್ಣಂತಾಕ ಹೋಗನು ಬಾ ಬಾ.

**ಕೆಂಪಿ** – ಅಯ್ಯಯ್ಯೊ ದಾನ ನಾವಿಬ್ಬರು ಹಿಂಗ ಹೋಗಿ ನಮ್ಮಣ್ಣನ ಎದುರಿಗೆ ನಿಂತ್ರ ನಮ್ಮ ಕಥೀನಾ ಮುಗುಸ್ತಾನ ನೋಡು.

**ದಾನ** – ಅಲ್ಲ ಕೆಂಪಿ ಈಗೇನು ಮಾಡನಂತಿ.

**ಕೆಂಪಿ** – ಮತ್ತೇನು ನಮ್ಮ ಮನಿಯಾಗ ಇರಬೇಕಂತ ಮಾಡಿ-ಯೇನು ?

**ದಾನ** – ಅಲ್ಲಲೇ ಕೆಂಪಿ ನಮ್ಮ ಮದುವಿ ಆಗೋತನಕ ನನ್ನ ಬ್ಯಾರೇ ಮನಿ ನೋಡಿಕೋ ಅಂದೇನು.

**ಕೆಂಪಿ** – ಇಷ್ಟ್ಯಾಕ ಅವಸರ ಮಾಡತಿ. ಈ ವಾರದಾಗ ಎಲ್ಲಾ ಕೆಲಸ ಮುಗಿಸಿ ಬಿಡತ್ತೀನಿ. ನೀನು ಮೊದಲು ಮನೆಗೆ ನಡಿ. ನಾವಿಬ್ರು ನಿಂತಿದ್ದು ನಮ್ಮಣ್ಣ ನೋಡಿದ್ರು ಮುಂದಿನ ಕೆಲಸಲ್ಲ ಕೆಟ್ಟು ಹೋದಿತು.

ದಾನ – ಅಲ್ಲಾ ಈಗ ನನ್ನ ಮನೆಗೆ ಹೋಗಂದೇನು ?

ಕೆಂಪಿ – ಇಲ್ಲಾ!! ಇಲ್ಲೆ ಇರು ಅಂದೆ!

ದಾನ – ಹಿಂಗ್ಯಾಕ ಮಾತಾಡತೀಯೇ ನೀನು ಹಿಂಗ ಮಾಡಿದಂಗಲ್ಲಾ ನನಗೆ ಹೋಗಾಕ ಮನಸು ಬರವಲ್ದು ನೋಡು!

ಕೆಂಪಿ – ಈಗ ಏನು ಮಾಡಂದಿ ?

ದಾನ – ಮನ ಬಿಚ್ಚಿ ಕುಣಿದಾಡೋಣ ಅಂದೆ.

ಕೆಂಪಿ – ಅಯ್ಯಯ್ಯಪ್ಪ ಯಾರಾದರೂ ನೋಡಿದರ

ದಾನ – ಕೆಂಪಿ ಯಾರು ನೋಡಿದ್ರ ಏನು ? ಮನಸು ಬಂದಾದ ಮೇಲೆ ಆ ಮಹದೇವನಿಗೂ ಹೆದರಬಾರದಂತೆ. ಮನಸಾರೆ ಹಾಡಿ ಕುಣಿಯೋಣ ! ಬಾ.

— ಹಾಡು —

ಗಂಡು – ಯಾರು ಇಲ್ಲಿಲ್ಲ ಕಣೆ ……
ಒಂದು ಮುತ್ತನ್ನು ಕೊಡು ।
ನಿನ್ನ ಬಿಟ್ಟು ನಾನು ಹೋಗಲ್ಲಕಣೆ ॥
ಹೆಣ್ಣು – ರೋಡಿನಲ್ಲಿ ಫ್ರಲಿಂಗ್ ಸರಿಯಲ್ಲ ಡಾರ್ಲಿಂಗ್ ।
ನಿನ್ನ ಬಿಟ್ಟು ನಾನು ನೆವರ್‌ಗೋಯಿಂಗ್ ॥ಯಾ॥
ಗಂಡು – ಲವ್ ಮಾಡಬೇಕು ಇಲ್ಲೇಕಣೆ ।
ಯಾರು ಬಂದರೇನು ಭಯವು ಕಣೆ ।
ಶಿವರಾಜ್‌ಕುಮಾರನಂತೆ ಕುಣಿಯೋಣ ಕಣೆ ।
ರೋಮಿಯೋ ಜುಲೆಟ್ ನಾವು ಕಣೆ ॥
ಹೆಣ್ಣು – ಆಸ್ತಿ ಏಷ್ಟು ಮಾಡಿ ಇಟ್ಟಿ ಕಣೋ ।
ತಾಳಿಕಟ್ಟೋ ತಾಕತ್ತು ಇದೆ ಏನ್ ಕಣೋ ।
ರಣಧೀರನಂತೆ ಸಾವು ಹಾಡೋಣ ಕಣೋ ।
ನಮ್ಮಣ್ಣ ಬಂದ್ರು ನೀನು ಹೆದರಬಾರದು ಕಣೋ ।
॥ ಯಾರು ॥

[ ಹಾಡು ಮುಗಿದ ಮೇಲೆ ]

**ಕೆಂಪಿ** – ಅಯ್ಯಯ್ಯ ನಮ್ಮ ಅಣ್ಣ ಬಂದ ಈಗೇನು ಮಾಡೋದು.

**ದಾನ** – ಹೌದು ಅಲ್ಲಲೇ ಯಾಕೋ ಒಳ್ಳೆ ಅವಸರದಾಗ ಬರಕ ಹತ್ಯಾನ. ನೀನು ಮೊದಲು ಇಲ್ಲಿಂದ ಜಾಗ ಬಿಡು.

**ಕೆಂಪಿ** – ಸರಿ ನಾನಿನ್ನು ಬರ್ತೀನಿ, ನಾಳೆ ಇದೇ ಹೊತ್ತಿಗೆ ಬರ್ತಿನಿ.

[ ಕೆಂಪಿ ಹೋಗುವಳು, ಇನ್ನೊಂದು ಕಡೆಯಿಂದ ಧರ್ಮಣ್ಣ ತನ್ನ ಬಟ್ಟೆಯ ಮೇಲೆ ಪರಿವೇ ಇಲ್ಲದೆ ಅವಸರದಿಂದ ಅಂಗಿ ಕೈಯ್ಯಲ್ಲಿ ಹಿಡಿದು ಕಚ್ಚೆ ಬಿಚ್ಚಿರುವುದು. — ತೇಕುತ್ತಾ ಬರುವನು.

**ಧರ್ಮಣ್ಣ** – [ ದಾನನನ್ನು ನೋಡಿ ಹತ್ತಿರ ಹೋಗಿ ] ಲೇ ದಾನ ಎಲ್ಲಾ ಹಾಳಾಗಿ ಹೋತಲೆ.

**ದಾನ** – ಅಲ್ಲರಿ ಧರ್ಮಣ್ಣರೆ ಏನು ಹಾಳಾತ್ರಿ ? ಹಿಂಗ್ಯಾಕ ತೇಕೊಂತ ಓಡಿ ಬಂದ್ರಿ ? ನಿಧಾನವಾಗಿ ಹೇಳ್ರಿ ?

**ಧರ್ಮಣ್ಣ** – ಅದನ್ನ ಯಾವ ಬಾಯಿಂದ ಹೇಳಲೊಯುಪ್ಪಾ!

**ದಾನ** – ಮತ್ತೇನ ಹೇಳಕ ಬಾಡ್ಗಿ ಬಾಯಿ ತರಬೇಕಂತ ಮಾಡಿ ಯೇನಾ? ಯಾ ನಿಮ್ಮ ಬಾಯಿಂದನ ಹೇಳರಿ.

**ಧರ್ಮಣ್ಣ** – ನೋಡು ದಾನ ಯಾಕೊ ಏನೋ ಈಗೊಂದು ಎಂಟು ದಿವಸದಿಂದ ಮೈ ಅನ್ನೋದು ಕಲ್ ಅದಂಗ ಆಗಿತ್ತಪ್ಪ. ಸ್ವಲ್ಪ ಮೈಯುರ ಹಗುರ ಮಾಡಿಕೊಳ್ಳೋಣ ಅಂತ ಸೂಳೇರಗೇರಿಗೆ ಹೋಗಿದ್ನೆಪ?

**ದಾನ** – ಏನ್ರಿ ಧರ್ಮಣ್ಣರ ನೀವು ಸೂಳೇರಗೇರಿಗೆ ಹೋಗಿದ್ರಾ. ಅಂದ್ರ ಸೂಳೇರ ಮನಿಗೆ............ಛೆ ಛೆ ಛೆ ? ಎಂತಹ ಹೊಲಸು ಕೆಲಸ ದಂದೆಕ ಹೋಗಿರಿ.

**ಧರ್ಮಣ್ಣ** – ಅದನ್ನೇನು ಹಂಗ ಆಶ್ಚರ್ಯವಾಗಿ ಕೇಳತಿಯಲ್ಲಲೇ ಮಗನ. ಮೈ ವಜಿ ಆತಂದ್ರ ಎಲ್ಲರು ಆ ಜಾಗಕ್ಕ ಹೋಗದು. ನಾನೊ-

ಬ್ಬನ ಏನಲೇ? ಮೊದಲು ನನ್ನ ಪೂರ್ತಿ ಕಥಿ ಕೇಳ.

**ದಾನ** – ಛೇ ಇಂತಹ ಕಥೆ ಕೇಳದಿದ್ರ ಹೆಂಗ ಹೇಳ್ರಿ. ಹೇಳ್ರಿ ಮುಂದೇನಾತು?

**ಧರ್ಮಣ್ಣ** – ಅದಲೇ, ದಾನ ಕಡೆ ಮನಿ ಸುಂಕದ್ದ ಅದಳಲ್ಲ. ಆಕಿ ಮನಿಗೆ ಹೋದ್ನೆಪಾ. ಹೋದವ್ನ ಖಾಲಿ ಅದಿ ಏನು ಅಂತ ಕೇಳ್ದ್ಲು ಅಂದ್ಲಪ ಅದಕ ನಿನ್ನ ರೇಟು ಎಷ್ಟು ಅಂದೆ. ಅದಕ ಆಕಿ ವಪ್ಪತ್ತಿಗೆ ಇಪ್ಪತ್ತು ಅಂದ್ಲು. ಸಂತಿ ಮುಗಿಸ್ಕೊಂಡು ಹೋಗಿದ್ನಾ ಕಿತ್ತು ಕೊಟ್ಟ-ಬಿಟ್ಟೆನಲೇ?

**ದಾನ** – ಏನ್ರಿ?

**ಧರ್ಮಣ್ಣ** – ರೊಕ್ಕನಲೇ. ಎಪ್ಪತ್ತು ಎಣಿಸಿಕೊಂಡಾಕೆ ನನ್ನ ಒಳಗೆ ಕರಕೊಂಡು ಹೋದ್ಲಪ ತನ್ನ ಪ್ರವೇಟ್ ರೂಮಿನ್ಯಾಗ ಕುಂದ್ರಿಸಿದ್ಲು. ಹೊರಗಿನ ಬಿದಾ ಹಾಕು ಅಂದೆ. ಹಾಕಿ ಬಂದ್ಲು ಹಾಕಿಬಂದಾಕೆ ನನ್ನ ಜೊತಿಗೆ ಕುಂತ್ಲು. ದಾನ ಆಕಿ ರೂಮು ಏನ ಚೆಂದ ಐತಲೆಯಪ್ಪಾ ಮೇಣಾ ಎತ್ತರ ಐತಲೆಯಪ್ಪಾ ಆಕಿದು ಗಾದಿ. ಇನ್ನು ಮಂಚ ಅಂತೀಯಾ ಅದನ್ನ ಹೇಳಂಗ-ಇಲ್ಲ ಬಿಡಲೇ. ತಣ್ಣಗ ಕರೆಂಟಿಂದು ಪಂಕದ ಗಾಳಿ ಬೀಸತಿತ್ತು. ಮಗ್ಗಲದಾಗ ಈಕೀನ ಕುಂದ್ರಿಸಿಕೊಂಡು ಅವರ ಸುಖದ ಅನುಭವದಾಗ ಇದ್ನಲೇ....?

**ದಾನ** – ಅಲ್ಲರಿ ಅಷ್ಟ ಆತ.... ಇನ್ನು ಮುಂದೆ ಏನರ....?

**ಧರ್ಮಣ್ಣ** – ಇನ್ನು ಚಡ್ಡಿ ಕುಸ್ತಿ ಚಾಲುವು ಆಗತಿತ್ತಲೇಯಪ್ಪಾ ಆಗ ಕೇಳಿತು ನೋಡಲೇ ಶಬ್ದ!

**ದಾನ** – ಯಾವ ಶಬ್ದರೀ........

**ಧರ್ಮಣ್ಣ** – ಪೋಲೀಸರ ಸೀಟಿ ಶಬ್ದ!! ಆಮೇಲೆ ಅವರು ಬಂದು ಈಕಿ ಮನಿ ಬಿದ ಬಡಿಯಾಕ ಹತ್ತಿದ್ರಲೇ? ಆಗ ತಣ್ಣಗಾದೆ ನೋಡಲೆ. ನಾನು ಯೊಕಂದ್ರ ಆಕಿ ಮನಿಗೆ ಒಂದ ಬಾಗಿಲಲೇ ಹೊರಗ ಹೇಗೆ ಬರೋದು ಅಂತ ಯೋಚನೆ ಬಿತ್ತು ನೋಡಲೇ.

ದಾನ – ಮತ್ತ ನೀವು ಹ್ಯಾಂಗ ಬಂದ್ರಿ ಹೊರಗೆ.

**ಧರ್ಮಣ್ಣ** – ಯೋಚನೆ ಮಾಡಕ್ತ ಪ್ಯಾಗ ನೋಡಿದೆ ಬಾದಾಳ ಕಣ್ಣಿಗೆ ಬಿತ್ತು ಮಂಚ ಹತ್ತಿ ಬಾದಾಳ ಕಿತಗೊಂಡು ಮಾಳಿಗಿ ಜಿಗುದು ಓಡಿ ಬಂದ್ನೆಲೆಯಪ್ಪಾ ನನ್ನ ಪಾಲಿಗೆ ಆ ಬೆಳಕಿಂಡಿ ಕನಕನಕಿಂಡಿ ಆತು ನೋಡಲೆಯಪ್ಪಾ! ಇಲ್ಲದಿದ್ರ ನಾನು ಇವತ್ತು ಪೋಲೀಸರ ಕೈಯಾಗ ಸಿಕ್ಕು ಏನಾಕಿದ್ನೊ ಏನೋ ಅಂತು ಉಳುಕೊಂಡು ಬಂದ್ನೆಪಾ.

**ದಾನ** – ಅಂತು ಪಾರಾಗಿ ಬಂದಿರಲ್ಲ ಬಾದಾಳದಗಿಂದ ನಿಮ್ಮದು ದೊಡ್ಡ ಧೈರ್ಯನಾ!

**ಧರ್ಮಣ್ಣ** – ಮತ್ತೇನ ಮಾಡ್ಲಲೇ ಅಂತಹ ಜಾಗಕ್ಕೆ ಹೋದ ಮೇಲೆ ಬಾದಾಳದಗಿಂದರ ಬರಬೇಕು, ಬಚ್ಚಲ ಮೋರೆಗಿಂದರ ಬರಬೇಕು ಎಲ್ಲದಕು ತಯಾರ ಆದ್ರ ಇಂತ ಕೆಲಸಕ್ಕೆ ಕೈ ಹಾಕಬೇಕು.

**ದಾನ** – ರೀ ಧರ್ಮಣ್ಣರಾ ಭಾರಿ ಧರ್ಮದ ಕೆಲಸಕ್ಕೆ ಹೋಗೀರಿ. ಅಲ್ರಿ ಏನ್ರಿ ನಿಮ್ಮ ಅವತಾರ ಮೊದುಲು ಕಚ್ಚಿ ಹಾಕೊಂಡು ಅಂಗಿ ತೊಟಗೊಳ್ರಿ. ಮೈಮೇಲೆ ಬಟ್ಟಿ ಕಬರ ಇಲ್ಲದಂಗ ನಿಮ್ಮ ರಸಲೀಲೆ ಹೇಳಕೊಂತ ನಿಂತಿರಲ್ಲ. ಯಾರಾದರೂ ನೋಡಿದ್ರ ಓಡಿಸ್ಯಾಡಿ ಓಡಿಸ್ಯಾಡಿ ಬಡದಾರು. ಮೊದುಲು ಹಾಕ್ಕೊಳ್ರಿ ಕಚ್ಚಿನಾ,

[ ಧರ್ಮಣ್ಣ ಕಚ್ಚಿ ಹಾಕಿಕೊಂಡು ಅಂಗಿ ಹಾಕಿಕೊಳ್ಳುವಷ್ಟರಲ್ಲಿ ಪೋಲೀಸರ ಶೀಪಿ ಶಬ್ದ ಕೇಳುವುದು. ]

**ಧರ್ಮಣ್ಣ** – ಲೇ ದಾನ ಪೋಲೀಸರು ನನ್ನ ಹುಡುಕಿಕೊಂಡು ಈಕಡೆಗೆ ಬಂದ್ರುಲೆ ಈಗೇನು ಮಾಡೋದಲೇ ?

**ದಾನ** – ಹೌದಲ್ರಿ ನೀವೇನು ಹೆದರಬೇಡ್ರಿ. ಆ ನಡ್ರಿ ನಮ್ಮ ತೋಟದ ಕಬ್ಬಿನ್ಯಾಗ ನಡುಕ್ಕ ಹೋಗಿ ಕುಂತುಬಿಡ್ರಿ ಹುಡ್ಕಿ ಹುಡ್ಕಿ ತಾವ ಹೋಗತಾರ.

**ಧರ್ಮಣ್ಣ** – ಹೌದು ನಡಿಯಲೇ ಅಷ್ಟು ಮಾತೋನು ನಡಿ. ಹೋಗೋಣ. [ಇಬ್ಬರೂ ಗಾಬರಿಯಿಂದ ಒಂದು ಕಡೆ ಹೋಗುವರು ಆಕಡೆ ಪೋಲೀಸರ ಪೀಪಿ ಶಬ್ದ ಕೇಳುವುದು] ಲೇ ದಾನ ಈ ಕಡೆನೆ ಇದ್ದಂಗ ಅದರಲೆ ಓಂಗದ್ದ ಹೋಗೋಣ ಬಾರಲೆ [ಇನ್ನೊಂದುಕಡೆ ಹೋಗುವರು. ಆಕಡೆನು ಪೀಪಿ ಶಬ್ದ ಕೇಳುವುದು.]

**ದಾನ** – ಈ ಕಡೆ ಬ್ಯಾಡರಿ ಪೋಲೀಸರ ಪೀಪಿ ಶಬ್ದ ಈ ಕಡಿಗೆ ಕೇಳಾಕ ಹತ್ಯೆತಿ. ಈ ಕಡೇನೆ ಹೋಗೋಣ ನಡಿರಿ. [ಹೀಗೆ ಗಾಬರಿಯಿಂದ ಆ ಕಡೆ ಈ ಕಡೆ ಓಡಾಡುವಷ್ಟರಲ್ಲಿ ಪೋಲೀಸರು ಬಂದು ದಾನನನ್ನು ಹಿಡಿದುಕೊಳ್ಳುವರು]

**ಪೋಲೀಸ್** – ಲೇ ಮಗನ ಸೂಳೆ ಸುಂಕವ್ವನ ಮನೆಯಿಂದ ನಮ್ಮ ಕೈಗೆ ಸಿಗದಂಗ ತಪ್ಪಿಸಿಕೊಂಡು ಓಡಿಬಂದಿಯಲಲೇ.

**ದಾನ** – ಸಾಹೇಬರೆ ಸಾಹೇಬರೆ ನಾನಲ್ಲರಿ. ನಾನಲ್ಲರಿ.

**ಪೋಲೀಸ್** – ಇಕ್ಕತೀನಿ ನೋಡು ಮಗನ. ನಮಗೆ ಗೊತ್ತಿಲ್ಲಂತ ತಿಳಿದಿಯೇನಲೇ ಸಿಕ್ಕಾಗ ಎಲ್ಲಾರು ಹಿಂಗಲೇ ಹೇಳೋದು, ಸುಂಕವ್ವನ ಮನಿಯಾಗ ಆಕಿ ಬಾದಾಳ ಕಿತ್ತು ಮಾಳಗಿ ಜಿಗಿದು ಓಡಿ ಬಂದದ್ದು ನಾನು ಕಣ್ಣಾರೆ ನೋಡಿನಲೆ ಅದಕ ನಿನ್ನ ಬೆನ್ನ ಹತ್ತಿ ಬಂದಿದ್ದು. ನನಗ ಸುಳ್ಳು ಹೇಳತಿ ಏನಲೆ! ರ್‍ಯಾಸ್ಕಲ್ [ಬೆತ್ತದಿಂದ ದಾನನನ್ನು ಹೊಡೆಯುವನು]

**ದಾನ** – ರೀ ಸಾಹೇಬ್ರಾ ನನ್ನ ಮೈಯ್ಯ ಯಾಕ ಮುಗ್ಗಲು ಮಾಡತೀರಿ. ನಾನಲ್ಲ ಓಡಿ ಬಂದಿದ್ದ. ಇಲ್ಲೆ ಅದಾನ ನೋಡ್ರಿ ಈ ಭೂಲೋಕದ ಧರ್ಮರಾಜ.

**ಧರ್ಮಣ್ಣ** – ಛಾಕಲೇ ದಾನ ಮಾಡೋ ಕೆಲಸ ಮಾಡಿ ನನ ಮ್ಯಾಗ ಹಾಕಬೇಕಂತ ಮಾಡಿಯೇನಲೇ ನಿಂತಾಗ ಈ ಹಲಕಟ್ಟ ಬುದ್ದಿ ಮೊದಲಿಂದಲೂ ಐತಿ. ನನಗೇನು ಗೊತ್ತಿಲ್ಲೇನು? ರೀ ಸಾಹೇಬ್ರೆ ಇವನ

ಊರೇಣ್ಗೆ ಊರಗ ಬಾಳ ಆಗ್ಯೆತ್ರಿ. ಮೇಲಾಗಿ ನಾನು ಎಂಥಾ ಮನುಷ್ಯ ಅನ್ನೋದು ನಿಮಗ ಗೊತ್ತೈತಿ. ಅಲ್ಲರಿ ಪಾರ ಸಂತ್ಯಾಗ ಬೆಟ್ಟಿ ಹಾಕಿರಲ್ಲ. ನನದೊಂದೂ ಗದ್ಲನಾದ್ರು ಕೇಳಿರ್ರ್ಯಾ! ಬಿಡಬೇಡರಿ ಇವನ ಇನ್ನೊಮ್ಮೆ ಇಂತಹ ಹಲಕಟ್ಟ್ ಕೆಲಸಕ್ಕೆ ಕೈ ಹಾಕಿರಬಾರದು ನೋಡ್ರಿ ಹಂಗ ಮಾಡಿ ಕಳಸ್ರಿ.

**ದಾನ** – ರೀ, ರಿ. ಧರ್ಮಣ್ಣರ ಊಟ ಮಾಡೊ ಬಾಯಿಂದ ಯಾಕ ಸುಳ್ಳು ಹೇಳತೀರಿ.

**ಪೋಲೀಸ್** – ಬಾಯಿ ಮುಚ್ಚಲೇ ಲೋಫರ್. ಮಾಡೊ ಹಲ್ಕ ಕೆಲ್ಸ ಮಾಡಿ ದೇವರಂಗ ಇರೋ ಧರ್ಮಣ್ಣರಿಗೆ ಅಪವಾದ ಕೊಡತೀಯಾ ಮಾನವಾಗಿ ಬಾಳೋರ ಮರ್ಯಾದಿ ಕಳಿಬೇಕಂತ ಮಾಡಿಯೇನಲೇ ನಡಿ ಯಲೇ ಮಗನ.... ಮೊದಲು ಸ್ಟೇಷನಿಗೆ. [ರಟ್ಟೆ ಹಿಡಿದು ಎಳೆಯುವರು]

**ಧರ್ಮಣ್ಣ** – [ಸ್ವಾಗತ] ಅಯ್ಯಯ್ಯಪ್ಪಾ ಪಾರಾದ್ನೆಪಾ

**ಪೋಲೀಸ್** – ರೀ ಧರ್ಮಣ್ಣರ ನೀವು ಷ್ಟೇಶನಿಗೆ ನಡಿರಿ.

**ಧರ್ಮಣ್ಣ** – ಮತ್ತ ನಾನ್ಯಾಕರಪ್ಪ

**ಪೋಲೀಸ್** – ಸಾಕ್ಷಿ ಹಾಕೊಡಕ ಬೇಕು.

**ಧರ್ಮಣ್ಣ** – ಹಂಗಾ ನಾನೊಂದು ನಮೂನಿ ಹೆದರಿಬಿಟ್ಟಿದ್ದೆ. ಹೇ ನಡ್ರಿ ಬರ್ತೀನಿ. ಇಂತಹ ಹಲಕಟ್ ಜನಕ ಸಾಕ್ಷಿ ಆಗಲೇಬೇಕು. ಒಂದ್ಯಾಕ ಹತ್ತು ಸಾಕ್ಷಿ ಹಾಕತೀನಿ ನಡ್ರಿ.

**ಪೋಲೀಸ್** – ನಡಿಯಲೇ ಬೇಕೂಫ್ [ಎಂದು ಎಳೆದುಕೊಂಡು ಹೋಗುವರು. ಹಿಂದೆ ಧರ್ಮಣ್ಣ ಒಳ್ಳೆ ಖುಷಿಯಿಂದ ಹೋಗುವರು]

[ ಅದೇ ಜಂಗಲ್ ರಸ್ತಾದಲ್ಲಿ ವಿಶ್ವಚಂದ್ರ ಬರುವನು ]

**ವಿಶ್ವಚಂದ್ರ** – ಅಂದ ಚೆಂದದ ಆಗರದಲ್ಲಿ ನನ್ನ ಕಡೆಗಣ್ಣಿನ ಕುಡಿ ನೋಟಕ್ಕೆ ಈ ಕುಸುಮ ದುಂಬಿಯು ಒಳಗೆ ತಾನಾಗಿಯೇ ಸೇರಿತು. ಈ

ವಿಶ್ವಚಂದ್ರನು ಬೀಸಿದ ಬಲೆಯಲ್ಲಿ ಬೀಳಲು ನೆರಳೆನ್ನದೇ ಸುಮಗಳು ಸುಧೆಯನ್ನೀಡಲು ಈ ದುಂಬಿಯ ಒಳಗೆ ತಾವಾಗಿಯೇ ಬರ ಹತ್ತಿವೆ. ಇಲ್ಲಿಯವರಿಗೆ ನಾನು ಮಾಡಿದ ಕಾರ್ಯಗಳೆಲ್ಲ ಯಾವ ಅಡೆ ತಡೆಗಳಿಲ್ಲದೆ ಸುಲಭವಾಗಿ ಸಾಗಹತ್ತಿವೆ. ರವಿಚಂದ್ರನ ಮಡದಿ ಕಾಂಚನ ನನ್ನ ಮೋಹದ ಕಡಲಲ್ಲಿ ಮುಳುಗಿ ತೇಲಿದಳು. ರವಿಚಂದ್ರ ಹೇಳಿದಂತೆ ಕಾಂಚನ ಮಹಾ ಗರತಿಯೆಂದು ನಾ ತಿಳಿದಿದ್ದೆ. ಆದರೆ ಛಂಡರಂಡೆಯರ ಸಾಲಿನಲ್ಲಿ ಮೊದಲನೇ ನಂಬರ್ ಇವಳದೇ ಇರಬೇಕು. ಇಂತಹ ಛಂಡರಂಡಿಯರು ಇರುವುದರಿಂದಲೇ ನಮ್ಮಂತ ರಸಿಕ ತರುಣರ ವಿಲಾಸ ಜೀವನ ವೈಭವದಿಂದ ಸಾಗ ಹತ್ತಿದೆ. ಈ ವಿಶ್ವಚಂದ್ರನ ವಿಕೃತ ರೂಪಕ್ಕೆ ವಿಲಾಸದ ಸವಿ ಮಾತುಗಳ ಮಾತಿಗೆ ಮರುಳಾಗದ ಹೆಣ್ಣುಗಳಿಲ್ಲ ಈ ಜಗದಲ್ಲಿ. ನಾ ಬಯಸಿ ಹಂಬಲಿಸಿದಂತೆ ಇನ್ನು ಈ ಊರಲ್ಲಿ ನನ್ನ ದೃಷ್ಟಿಯಲ್ಲಿ ಉಳಿದಿರುವವಳೆಂದರೆ ಅರ್ಚನಾ ಒಬ್ಬಳೇ, ಅವಳ ಮೈ ಮಾಟದ ಬಣ್ಣಕ್ಕೆ ಕಣ್ಣು ಕೊರೆಸುವ ಅವಳ ರೂಪಕ್ಕೆ ನನ್ನ ಮನ ಸೋತು ಹೋಗಿದೆ. ಅರ್ಚನಾ! [ ನಕ್ಕು ] ನೀನಾಗಿಯೇ ಬಂದು ನನ್ನನ್ನು ಸೇರಬೇಕು. ಅಂತಹ ಹಂಚಿಕೆಯನ್ನು ಹಾಕುವೆ. ಈ ವಿಶ್ವಚಂದ್ರನ ಹಂಚಿಕೆಗಳೇನು ಸಾಮಾನ್ಯವಲ್ಲ. ಈ ವಿಶ್ವದ ವಿರಾಟದ ಸ್ವರೂಪನು ನಾನು ಈ ನನ್ನ ಮರ್ಮದ ಆಟ ಇದುವರಿಗೆ ಯಾರಿಗೂ ತಿಳಿದಿಲ್ಲ. ಮುಂದೆಯು ತಿಳಿಯುವುದಿಲ್ಲ. ಬೇರೊಬ್ಬನ ಮಡದಿಯೇ ಸುಲಭವಾಗಿ ನನ್ನ ವಶವಾಗಿರುವಾಗ ಇನ್ನು ಅರ್ಚನಾ [ನಗುವನು] ಅವಳೋರ್ವ ಸೂಳೆ. ಅವಳನ್ನು ವಶಮಾಡಿಕೊಳ್ಳುವುದು ಈ ವಿಶ್ವಚಂದ್ರನಿಗೇನು ಅಸಾಧ್ಯವಲ್ಲ. [ನಗುತ್ತಾ ಹೋಗುವಾಗ ಅರ್ಚನಾ ಎದುರಿಗೆ ಬರುವಳು] ಓ ಅರ್ಚನಾ....?

**ಅರ್ಚನಾ** – ಕೀರ್ತಿಚಂದ್ರರ ಮುದ್ದು ಮಗ ಸೂರ್ಯಚಂದ್ರರ ಹೆಂಡತಿಯೇ ನಾನು ಅಂದ್ರೆ ಅರ್ಚನಾ.

**ವಿಶ್ವಚಂದ್ರ** – ಹೂ. ಹೌದೆ ಹಾಗಾದರೆ ಈ ಊರಲ್ಲಿ ನಿನ್ನ ಹೆಸರಿನವರು ಬೇರೆವಬ್ಬಳು ಇರುವಳೇ ?

**ಅರ್ಚನ** – ಇಲ್ಲ, ಅರ್ಚನ ಅಂತ ಇರುವವಳು ನಾನೊಬ್ಬಳೆ ಈ ಊರಲ್ಲಿ. ಅದು ಇರಲಿ ಮತ್ತೊಬ್ಬರ ಮಡದಿಯನ್ನು ನಿರ್ಭಯವಾಗಿ ಮಾತನಾಡಿಸುವಿಯಲ್ಲಾ ಪರನಾರಿಯರನ್ನು ಮಾತನಾಡಿಸುವ ರೀತಿಯೇ ಇದು ?

**ವಿಶ್ವಚಂದ್ರ** – ರೀತಿ ನೀತಿಯನ್ನು ಅರಿಯದಂತಹ ಅವಿವೇಕಿ ನಾನಲ್ಲ. ಓ. ಹೋ. ಹೋ. ಅರ್ಚನಾ ಅಂತ ಏಕವಚನದಿಂದ ಕರೆಯ ಬಾರದಾಗಿತ್ತೋ ಏನೋ ಹುಂ ಅರ್ಚನಾ ದೇವಿಯವರೇ ನಿಮ್ಮ ಪತಿಯ ಜೊತೆಯಲ್ಲಿ ಅಲ್ಲಲ್ಲ ನಿಮ್ಮ ಯಜಮಾನರ ಜೊತೆಯಲ್ಲಿ ಹೊರಡುತ್ತಿದ್ದ ನೀವು ಇಂದೇಕೋ ಒಂಟಿಯಾಗಿ ನಿರಾಶೆಯಿಂದ ಈ ಮಾರ್ಗವಾಗಿ ಹೊರಟಿರುವಿರಲ್ಲ!

**ಅರ್ಚನ** – ವಿಶ್ವಚಂದ್ರ ನೀವು ನನ್ನ ಪತಿಯ ಸ್ನೇಹಿತರೆಂದು ಇದುವರೆಗೂ ಮರ್ಯಾದೆ ಕೊಟ್ಟು ಮಾತನಾಡುತ್ತಿರುವೆ. ಅದನ್ನು ಉಳಿಸಿ ಕೊಂಡು ಸರಿಯಾದ ಮಾರ್ಗದಲ್ಲಿ ನಡೆಯಿರಿ. ಒಂದು ಹೆಣ್ಣು ಒಂಟಿ ಯಾಗಿ ಹೊರಟಿರುವಳೆಂದು ವ್ಯಂಗ್ಯವಾಗಿ ಮಾತನಾಡಿದರೆ ಪರಿಸ್ಥಿತಿ ಕೆಡುತ್ತೆ ಗೊತ್ತೆ ?

**ವಿಶ್ವಚಂದ್ರ** – ಅರ್ಚನಾ ದೇವಿಯವರೇ ನಾನು ವ್ಯಂಗ್ಯವಾಗಿ ಮಾತನಾಡಿದೆನೆಂದು ನಿಮ್ಮ ಭಾವನೆಯೇ ?

**ಅರ್ಚನ** – ಮಿಷ್ಟರ್! ವಿಶ್ವಚಂದ್ರ ನೀವು ಮಾತನಾಡಿದ ವ್ಯಂಗ್ಯ ಮಾತುಗಳಲ್ಲಿ ನೀವು ನೋಡುವ ವಕ್ರದೃಷ್ಟಿಯನ್ನು ನೋಡಿ ನಿನ್ನ ವ್ಯಕ್ತಿತ್ವ ವನ್ನು ಹೇಗೆ ಅಳೆಯಬೇಕಾಗಿದೆ ಎಂದು ಆಲೋಚಿಸುತ್ತಿದ್ದೇನೆ.

**ವಿಶ್ವಚಂದ್ರ** – O I C ಅರ್ಚನಾ। ನಿನ್ನ ಆಲೋಚನೆ ಸರಿಯಾಗಿದೆ. ನನಗೆ ನೀನು ಬೇಕು. ಅಂತೆಯೇ ಈ ನಿಸರ್ಗದ ಮಡಿಲಲ್ಲಿ ನಿಲ್ಲಿಸಿ ಮಾತನಾಡುತ್ತಿರುವುದು. ಕಾರಣ ನಿನ್ನ ದುರ್ವಿಚಾರವನ್ನು ಕಿತ್ತೊಗೆದು ನನ್ನ ಹೃದಯ ಮಂದಿರದಲ್ಲಿ ಅಧಿದೇವತೆಯಾಗಿ ಬಾಳುವಂತಹ ಪ್ರಯತ್ನವನ್ನೇ ನೀನೆಸೆಸು.

**ಅರ್ಚನ** – [ವ್ಯಂಗ್ಯ ನಗೆ] ನಿನ್ನ ಹೃದಯ ಮಂದಿರದಲ್ಲಿ ಅಧಿದೇವತೆಯಾಗಿ ಬಾಳುವಂತಹ ಪ್ರಯತ್ನ ನಾನು ಮಾಡಬೇಕೆ? ಕಾಡಿನ ಮರಗಳೆಲ್ಲಾ ಶ್ರೀಗಂಧವಾಗಲು ಸಾಧ್ಯವೇ?

**ವಿಶ್ವಚಂದ್ರ** – ಅರ್ಚನಾ ಈ ನಿನ್ನ ಸುತ್ತಿ ಬಳಸಿ ಮಾತನಾಡುವ ಮಾತುಗಳು ನನಗೆ ಬೇಕಾಗಿಲ್ಲ. ನಾನು ನಿನ್ನನ್ನು ಬಯಸಿದ್ದೇನೆ. ನನ್ನ ಆಸೆ ಸಫಲವಾಗಲು ನೀನು ನನ್ನವಳಾಗಲೇಬೇಕು. ನೀನು ನನ್ನವಳಾದರೆ ಶ್ರೀಗಂಧದ ಸ್ವಭಗಿನಲ್ಲಿ ತೇಲಾಡಿಸುವೆ.

**ಅರ್ಚನ** – ನಿನ್ನ ಆಸೆಯಂತೆ ಅರಗಿಣಿಯಾಗಲು ಈ ಸುಗಂಧ ಇನ್ನೊಬ್ಬರ ಸೊತ್ತಾಗಿದೆ ಎಂಬುವನ್ನು ಅರಿತು ಮಾತನಾಡು.

**ವಿಶ್ವಚಂದ್ರ** – ಅರ್ಚನಾ ನಿನ್ನ ಅನುಕಂಪದ ಮಾತುಗಳಿಗೆ ಬೆಚ್ಚಿ ಹೋಗುವವನು ನಾನಲ್ಲ. ನನ್ನ ಹೆಸರೆ ವಿಶ್ವಚಂದ್ರ. ಈ ವಿಶ್ವದ ವಿರಾಟ ಸ್ವರೂಪವೇ ನಾನು. ಕಣ್ಣಿಟ್ಟ ಹೆಣ್ಣನ್ನು ಕೆಣಕಿ ಕೆನ್ನೆಯ ಸವಿ ಉಣ್ಣುವುದೇ ನನ್ನ ಕೆಲಸ.

**ಅರ್ಚನ** – ವಿಶ್ವಚಂದ್ರ ನಾನು ನಿನ್ನ ಮಿತ್ರನ ಮಡದಿ. ನಿಮ್ಮ ಕಾಮದೃಷ್ಟಿ ಬೀಳದಿರಲಿ ನನ್ನ ಮೇಲೆ. ಮಿತ್ರನ ಮಡದಿ ನಿನಗೆ ಅತ್ತಿಗೆಯ ಸಮಾನ ಚೆನ್ನಾಗಿ ಜ್ಞಾಪಿಸಿಕೊಂಡು ಸುಮಾರ್ಗದಲ್ಲಿ ನಡೆ.

**ವಿಶ್ವಚಂದ್ರ** – ಏ! ಯಃಕಶ್ಚಿತ ಓರ್ವ ಸೂಳೆಯನ್ನು ನನ್ನತ್ತಿಗೆಯೆಂದು ಭಾವಿಸಲೇ? ಎಷ್ಟು ಜನ ಗರತಿಯರು ನನ್ನ ಕಡೆಗಣ್ಣಿನ ನೋಟಕ್ಕೆ ಮರುಳಾಗಿ ನನ್ನ ತೋಳ ತೆಕ್ಕೆಯಲ್ಲಿ ಹಾಯಾಗಿ ಕಾಲ ಕಳೆಯುತ್ತಿರುವರು ಅಂದ ಮೇಲೆ ನಿಮ್ಮಂತ ಸೂಳೆಯರಿಗೂ ಶೀಲದ ಮೇಲೆ ಸ್ವಾಭಿಮಾನ ಇರುತ್ತದೆಯೋ.

**ಅರ್ಚನ** – ವಿಶ್ವಚಂದ್ರ ಸೂಳೆ ಸೂಳೆಯೆಂದು ಪದೇ ಪದೇ ಏಕೆ ಹುಚ್ಚನಾಗಿ ಕಿರುಚುತ್ತಿರುವಿ. ಸೂಳೆಯರ ಪಟ್ಟ ಪಡೆದವರೆಲ್ಲ ಶೀಲಗೆಟ್ಟು

ನಡೆಯುತ್ತಾರೆಂದು ನಿನ್ನ ಭಾವನೆಯೇ "ಹುಚ್ಚುನಾಯಿ" ಹಾಗೆ ನೀನು ತಿಳಿದುಕೊಂಡಿದ್ದರೆ ನಿನ್ನ ಭಾವನೆ ತಪ್ಪು. ಅದು ಯಾವಳೋ ಒಬ್ಬಳು ತಿಳುವಳಿಕೆ ಇಲ್ಲದವಳು ಮಾಡುವ ಹೇಯವಾದ ಕಾರ್ಯ. ವಿವೇಕಿಯಾದ-ವಳು ಗರತಿಯಾಗಿದ್ದರೇನು? ಸೂಳೆಯಾಗಿದ್ದರೇನು? ತನ್ನ ಶೀಲವನ್ನು ಕಾಯ್ದುಕೊಂಡು ಕೈ ಹಿಡಿದವನೇ ತನ್ನ ಪತಿಯೆಂದು ತಿಳಿದು ಸುಮಾರ್ಗದಲ್ಲಿ ನಡೆದು ಮುಕ್ತಿ ಹೊಂದುತ್ತಾಳೆ. ನಿಮ್ಮಂಥ ಕಾಮಾಂಧರು ಹುಟ್ಟಿರು-ವುದರಿಂದಲೇ ಅಧರ್ಮದ ಕೃತ್ಯಗಳು ಹೆಚ್ಚಾಗಿ ನಡೆಯುತ್ತಿವೆ ಈ ಕಾಲ-ದಲ್ಲಿ. ವಿಶ್ವಚಂದ್ರ! ಸುಮ್ಮನೆ ಬಿಡು ದಾರಿಯನ್ನು.

**ವಿಶ್ವಚಂದ್ರ** – [ಕೃತಕ ನಗೆ] ಮೀನು ಬಲೆಯಲ್ಲಿ ಬಿದ್ದಾಗ ತಪ್ಪಿಸಿಕೊಂಡು ಹೋಗುವುದು ಅಷ್ಟೊಂದು ಸುಲಭವಲ್ಲ. ಬಲೆಯಲ್ಲಿ ಬಿದ್ದ ಮೀನಿನ ಮೇಲೆ ಕರುಣೆ ತೋರಿ ಬಿಟ್ಟು ಹೋಗುವಂತ ದಡ್ಡನು ನಾನಲ್ಲ ಅರ್ಚನಾ! [ನಗು] ಈ ನಿರ್ಜನ ಸ್ಥಳದಲ್ಲಿ ಯಾವ ಆತಂಕವೂ ನಮಗಿಲ್ಲ. ಸಂಕೋಚ ಪಡದೆ ನಿನ್ನ ಮೈ ಸುಖ ನೀಡಿ ನನ್ನನ್ನು ತೃಪ್ತಿ ಪಡಿಸು. [ಬಲತ್ಕಾರಕ್ಕೆ ಹೋಗುವನು]

**ಅರ್ಚನ** – ವಿಶ್ವಚಂದ್ರ ನನ್ನ ಮೈ ಸುಖ ಬೇಕೆ ನಿನಗೆ ತೆಗೆದುಕೋ "ಹುಚ್ಚುನಾಯಿ" [ಕೆನ್ನೆಗೆ ಹೊಡೆದು ಹೋಗುವಳು]

**ವಿಶ್ವಚಂದ್ರ** – ಅಬ್ಬಾ. ಒಬ್ಬ ಸೂಳೆಯಿಂದ ನನಗೆ ಇಷ್ಟೊಂದು ಅವಮಾನವೇ. [ನಕ್ಕು] ಅರ್ಚನಾ ಇನ್ನು ಉಳಿದುಕೋ ನನ್ನ ಕೈ ಯಲ್ಲಿ. ಇನ್ನು ಈ ಊರಲ್ಲಿ ಅದು ಹೇಗೆ ಬದುಕುತ್ತಾಳೋ ನಾನು ನೋಡಿಕೊಳ್ಳುತ್ತೇನೆ. ನನ್ನ ಹೆಸರೇ ವಿಶ್ವಚಂದ್ರ. ವಿಶ್ವದ ವಿರಾಟ ಸ್ವರೂಪವೆ ನಾನು. [ನಕ್ಕು ಹೋಗುವನು]

## ಪ್ರವೇಶ ೬ [ಮನೆ ಪ್ಲಾಟ್]

[ಡಾ|| ರವಿಚಂದ್ರ ಕಾಂಚನ ಒಳಗಿನಿಂದ ಬರುವರು ಡಾ|| ಕೈಯಲ್ಲಿ ಬ್ರೀಪ್‌ಕೇಸ್ ]

**ರವಿಚಂದ್ರ** – ಕಾಂಚನ ಆಸ್ಪತ್ರೆ ಕೆಲಸದ ಮೇಲೆ ನಾನು ಮೈಸೂರಿಗೆ ಹೋಗ ಬೇಕಾಗಿದೆ. ನಾನು ಮರಳಿ ಬರಬೇಕಾದರೆ ಸುಮಾರು 15 ದಿವಸ ಗಳಾಗಬಹುದು. ಬರುವವರೆಗೂ ಮಕ್ಕಳನ್ನು ಚೆನ್ನಾಗಿ ನೋಡಿಕೋ ಮತ್ತು ಮನೆಯಕಡೆ ಜೋಪಾನ.

**ಕಾಂಚನ** – ಅಲ್ಲರಿ ಮಕ್ಕಳನ್ನು ಚೆನ್ನಾಗಿ ನೋಡಿಕೋ ಎಂದು ನೀವು ನನಗೆ ಹೇಳಬೇಕೆ ? ಮಕ್ಕಳ ಮೇಲೆ ಮಮತೆ ತಂದೆಗಿಂತ ತಾಯಿಗೆ ಹೆಚ್ಚಿಗೆ ಇರುತ್ತದೆ.

**ರವಿಚಂದ್ರ** – ಹಾಗಲ್ಲ ಕಾಂಚನ ಮಕ್ಕಳ ಮೇಲೆ ನಿನ್ನ ಮಮತೆ ಇಲ್ಲವೆಂಬ ಉದ್ದೇಶದಿಂದ ಹೇಳಲಿಲ್ಲ. ಮಕ್ಕಳು ಶಾಲೆಗೆ ಹೋಗುವಾಗ ಬರುವಾಗ ವಾಹನಗಳ ಓಡಾಟದಲ್ಲಿ ಯಾವ ಅಪಾಯದಲ್ಲಿ ತುತ್ತಾಗದಂತೆ ನೋಡಿಕೋ ಅಂತ ಹೇಳಿದೆ. ಏಕೆಂದರೆ ಇಂದಿನ ವಾಹನ ಚಾಲಕರು ಯಮಲೋಕದ ಯಮಧೂತರೇ ಆಗಿದ್ದಾರೆ. ಕಾರಣ ಮಕ್ಕಳು ಶಾಲೆಗೆ ಹೋಗುವಾಗ ತುಂಬಾ ಜಾಗರೂಕರಾಗಿರುವಂತೆ ತಿಳುವಳಿಕೆ ಹೇಳಿ ಕಳಿಸ ಬೇಕು.

**ಕಾಂಚನ** – [ ನಕ್ಕು ] ಅಲ್ಲರಿ ಮಕ್ಕಳ ಮೇಲೆ ಎಷ್ಟೊಂದು ಮಮತೆ ಇದೆ ನಿಮಗೆ. ಇಂತಹ ಪತಿಯನ್ನು ಪಡೆದ ನನ್ನ ಭಾಗ್ಯಕ್ಕೆ ಎಣೆಯೇ ಇಲ್ಲ. ಅದು ಹೋಗಲಿ ಮೈಸೂರಿನಿಂದ ಬರುವಾಗ ನನಗೇನು ತರುತ್ತೀರಿ.

**ರವಿಚಂದ್ರ** – [ ನಕ್ಕು ] ನಿನಗೇನು ತರಬೇಕೆ? ಈಗಾಗಲೇ ನಿನಗೆ ತೊಟ್ಟು ಮೆರೆಯಲು ಸಾಕಷ್ಟು ಸೀರೆಗಳಿವೆ. ಶೃಂಗರಿಸಿಕೊಳ್ಳಲು ಸಾಕಷ್ಟು ಆಭರಣಗಳಿವೆ. ಮತ್ತೇ ನಿನಗೇನು ತರಬೇಕು ?

**ಕಾಂಚನ** – ಅಲ್ಲರಿ ನೀವೀಗ ಮೈಸೂರಿಗೆ ಹೋಗುತ್ತೀರ. ಮೈಸೂರಿನಿಂದ ಬಂದ ಮೇಲೆ ನಿನ್ನ ಗಂಡ ಮೈಸೂರಿನಿಂದ ಏನು ತಂದಿದ್ದಾನೆಂದು ಕೇಳಿದರೆ ನಾನೇನೆಂದು ಉತ್ತರಿಸಲಿ.

**ರವಿಚಂದ್ರ** – ನೆರೆಹೊರೆಯುವರು ಕೇಳಿದರೆ, ಮೈಸೂರಿನಿಂದ ನನ್ನ ಗಂಡ ಸುರಕ್ಷಿತವಾಗಿ ಮರಳಿ ಬಂದಿದ್ದಾರೆ. ಅದೇ ಅವರು ನನಗೆ ತಂದ ದೊಡ್ಡ ಉಡುಗೊರೆ ಅಂತಾ ತಿಳಿಸು.

**ಕಾಂಚನ** – ಎರಡು ಮಕ್ಕಳ ತಂದೆಯಾದರೂ ನಿಮಗೆ ಹುಡುಗಾಟವೇ ಹೋಗಲಿಲ್ಲ. ನನಗೆ ಮಾತ್ರ ಎರಡು ಸೀರೆಗಳನ್ನು ತರಬೇಕು ಅದಕ್ಕೆ ಮ್ಯಾಚ್ ಅಗುವಂತಹ ಎರಡು ಬ್ಲೌಸ್ ಪೀಸ್ ತರಬೇಕು ನೋಡಿ.

**ರವಿಚಂದ್ರ** – ತರುತ್ತೇನೆ ಬಿಡೆ. ನಿನಗಂತು ಬಟ್ಟೆಯ ಮೇಲೆ ಇಲ್ಲದಂತಹ ವ್ಯಾಮೋಹ ಇದೆ, ನೋಡು ಮಕ್ಕಳಿಗೆ ಏನಾದರೂ ತೆಗೆದು ಕೊಂಡು ಬನ್ನಿ ಎಂದು ಹೇಳುವುದನ್ನು ಬಿಟ್ಟು ನನಗೆ ತೆಗೆದುಕೊಂಡು ಬನ್ನಿ ಎಂದು ಹೇಳುತ್ತಿಯಲ್ಲಾ.

**ಕಾಂಚನ** – ನೋಡಿ ನೀವು ಮಕ್ಕಳಿಗೆ ತಂದೆ ತರುತ್ತೀರೆ ಎಂದು ನನಗೆ ಗೊತ್ತು ಮತ್ತೆ ನನಗೆ ತರುವುದು ಮರೆತೀರೆಂದು ನಿಮಗೆ ಹೇಳಿದೆ.

**ರವಿಚಂದ್ರ** – [ ಕೆನ್ನೆ ತಟ್ಟಿ ] ತರುತ್ತೇನೆ ಬಿಡೇ ಕಳ್ಳಿ, ನೀನು ಎಷ್ಟು ಶೃಂಗಾರವಾಗುತ್ತೀಯೋ ನಾನು ನೋಡುತ್ತೇನೆ.

**ಕಾಂಚನ** – ಥೂ ಹೋಗೀಪ್ಪಾ.

**ರವಿಚಂದ್ರ** – ಅಲ್ಲೇ ಎರಡು ಮಕ್ಕಳ ತಾಯಿಯಾದರೂ ನಿನಗೆ ನಾಚಿಕೆ ಹೋಗಿಲ್ಲ ಅಲ್ಲವೇ ?

**ಕಾಂಚನ** – ಒಳ್ಳೆಯ ಚೆನ್ನಾಗಿ ಇದೆ ನಿಮ್ಮ ಮಾತು. ಮಕ್ಕಳಾದ ತಕ್ಷಣ ಹೆಣ್ಣಿಗೆ ನಾಚಿಕೆ ಹೋಗುತ್ತದೆಯೆಂದು ತಿಳಿದಿರಾಯಿರೇನು ? ನಾವು ಮುಪ್ಪಾದರು ನಾಚಿಕೆ ಮುಪ್ಪಾಗುವುದಿಲ್ಲ.

**ರವಿಚಂದ್ರ** – ನಾನು ಅನ್ನೊಂದು ತಿಳಿದವನಲ್ಲ, ಹೋಗಲಿ ಬಿಡೆ ನಿನ್ನ ರಸಿಕತೆಯ ಮಾತು ಸಾಕು. ಆ. ವೇಳೆಯಾಯಿತು ನಾನು ಬೇಗನೆ ಮೈಸೂರಿಗೆ ಹೋಗಬೇಕೆಂದರೆ ವಿಶ್ವಚಂದ್ರ ಇನ್ನು ಬರಲಿಲ್ಲವಲ್ಲ.

**ಕಾಂಚನ** – ಅಲ್ಲರಿ ಇನ್ನು ಆಫೀಸಿನ ಕೆಲಸ ಮುಗಿದಿದೆಯೋ ಇಲ್ಲವೋ ಇಷ್ಟೊತ್ತಾದರೂ ಬರಲಿಲ್ಲ.

**ರವಿಚಂದ್ರ** – ಅವನಿಗೆಲ್ಲಿ ಆಫೀಸಿನ ಕೆಲಸ. ಅವನು ಆಸ್ಪತ್ರೆಯಲ್ಲಿ ಇರುವುದಿಲ್ಲ. ಅವನು ಈ ಊರಿಗೆ ಬಂದು ಒಂದು ವಾರ ಕೂಡ ಆಗಲಿಲ್ಲ ಆಗಲೇ ಸಾಕಷ್ಟು ಸ್ನೇಹಿತರನ್ನು ಮಾಡಿಕೊಂಡಿದ್ದಾನೆ. ಬೇರೆ ಸ್ನೇಹಿತರ ಕೂಡ ತಿರುಗುವುದೇ ಅವನ ಕೆಲಸ. [ ಅಷ್ಟರಲ್ಲಿ ವಿಶ್ವಚಂದ್ರ ಬರುವನು ]

**ಕಾಂಚನ** – ಅದೋ ಬಂದೆ ಬಿಟ್ಟ ನೋಡ್ರಿ.

**ರವಿಚಂದ್ರ** – ಏನು ವಿಶ್ವಚಂದ್ರ ಇಷ್ಟೊತ್ತು ಎಲ್ಲಿಗೆ ಹೋಗಿದ್ದೆ ನಿನ್ನ ಸಲುವಾಗಿ ಇಷ್ಟು ತಡವಾಯಿತು ನೋಡು.

**ವಿಶ್ವಚಂದ್ರ** – ಇಲ್ಲ ರವಿ, ಸೂರ್ಯಚಂದ್ರ ನನಗೆ ಪಾರ್ಟಿಕೊಡಲು ಕರೆದುಕೊಂಡು ಹೋಗಿದ್ದ ಆ ಹಾ ಹಾ...... ಎಂಥ ಪಾರ್ಟಿ ಕಣಯ್ಯ.

**ಕಾಂಚನ** – ವೈದುನ ಅಷ್ಟೊಂದು ಚನ್ನಾಗಿತ್ತೆ ಆ ಪಾರ್ಟಿ.

**ವಿಶ್ವಚಂದ್ರ** – ತುಂಬಾ ಚನ್ನಾಗಿತ್ತು ಅತ್ತಿಗೆ ಆ ಸೂರ್ಯಚಂದ್ರನ ಹೆಂಡತಿ ಅರ್ಚನಾ ನನಗೆ ತುಂಬಾ ಚನ್ನಾಗಿ ನೋಡಿಕೊಂಡರು.

**ರವಿಚಂದ್ರ** – ವಿಶ್ವ, ನಾನು ಈ ಊರಿಗೆ ಬಂದು 3 ವರ್ಷ ವಾಯಿತು. ನಿನ್ನಷ್ಟು ಸ್ನೇಹಿತರನ್ನು ಗಳಿಸಿರಲಿಲ್ಲ. ನೀನು ಒಂದು ವಾರದಲ್ಲಿ ಪಿಷ್ಟೊಂದು ಸ್ನೇಹಿತರನ್ನು ಸಂಪಾದಿಸಿರುವಿಯಲ್ಲ.

**ವಿಶ್ವಚಂದ್ರ** – ಎಲ್ಲಾ ನಿನ್ನ ಆಶೀರ್ವಾದ ಅಣ್ಣ.

**ಕಾಂಚನ** – ಅಲ್ಲರಿ ನಿಮ್ಮ ತಮ್ಮನಿಗೂ ಮೈಸೂರಿನಿಂದ ಒಳ್ಳೆಯ ಬಟ್ಟೆ ತೆಗೆದುಕೊಂಡು ಬನ್ನಿ.

**ರವಿಚಂದ್ರ** – ಕಾಂಚನ ನಿನಗೆ ತರುವುದನ್ನು ಬಿಡುವನೇ ವಿನಃ ನನ್ನ ತಮ್ಮನಿಗೆ ತರುವುದು ಮರೆಯುವುದಿಲ್ಲ. ಏಕೆಂದರೆ ನನ್ನ ಪ್ರೀತಿಯ ತಮ್ಮನೆಂದರೆ ಇವನೇ.

**ವಿಶ್ವಚಂದ್ರ** – ನನ್ನ ಮುದ್ದು ಅಣ್ಣ. [ಅಪ್ಪಿಕೊಳ್ಳುವರು]

**ರವಿಚಂದ್ರ** – ಸರಿ. ವಿಶ್ವ ನನಗೆ ವೇಳೆಯಾಯಿತು ನಾನು ಬರುತ್ತೇನೆ ನಾನು ಬರುವವರಿಗೂ ನೀನು ಎಲ್ಲಿಗೂ ಹೋಗಬೇಡ. ಏಕೆಂದರೆ ನಿನ್ನ ಅತ್ತಿಗೆ ಒಬ್ಬಳೇ ಆಗುತ್ತಾಳೆ.

**ವಿಶ್ವಚಂದ್ರ** – ಅಣ್ಣ ನೀನು ಮರಳಿ ಬರುವವರೆಗೂ ನಾನು ಮನೆ ಬಿಟ್ಟು ಎಲ್ಲಿಗೂ ಹೋಗುವುದಿಲ್ಲ. ನೀನು ಮನೆಯ ಕಡೆ ಚಿಂತಿಯೇ ಮಾಡಬೇಡಣ್ಣ.

**ರವಿಚಂದ್ರ** – ನಾನು ಹೋಗಿಬರಲೆ ಕಾಂಚನ. ಮಕ್ಕಳು ಆಟಕ್ಕೆ ಹೋಗಿದ್ದಾರೆ. ಆಟದಿಂದ ಬಂದಕ್ಷೂಡಲೇ ಮಕ್ಕಳಿಗೆ ಸ್ನಾನ ಮಾಡಿಸಿ ಊಟ ಮಾಡಿಸಿ ಶಾಲೆಗೆ ಕಳಿಸು.

**ಕಾಂಚನ** – ಎಲ್ಲಾ ವ್ಯವಸ್ಥೆ ಮಾಡುತ್ತೇನೆ ಹೋಗ್ರಿ.

**ವಿಶ್ವಚಂದ್ರ** – ರವಿ ನಾನು ನಿನ್ನ ಬಸ್ ಹತ್ತಿಸಿ ಬರುತ್ತೇನೆ ನಡೆ.

**ಕಾಂಚನ** – ನನ್ನ ಪತಿದೇವ ಮೈಸೂರಿಗೆ ಹೋದದ್ದು ಒಳ್ಳೆಯದೇ ಆಯಿತು. ಅದು 15 ದಿವಸ ಮರಳಿ ಬರುವುದಿಲ್ಲವಂತೆ. ನನಗಂತು ತುಂಬಾ ಅನುಕೂಲವಾಯಿತು. ಅವರು ಮನೆಯಲ್ಲಿ ಇದ್ದಿದ್ದರೆ ವಿಶ್ವಚಂದ್ರ ಹಾಗೂ ನನ್ನ ಪ್ರೇಮದ ಆಟಕ್ಕೆ ಅಡ್ಡಿ ಆಗುತ್ತಿದ್ದ. ಅವನು ಮೈಸೂರಿಗೆ ಹೋಗಿದ್ದು ನನಗೆ ಹಾಲು ಸಕ್ಕರೆ ಕುಡಿದಷ್ಟು ಸಂತೋಷವಾಗುತ್ತದೆ. ಆ! ಹಾ!! ವಿಶ್ವಚಂದ್ರನದು ಎಂತಹ ರೂಪ. ಎಂತಹ ನಡಿಗೆ, ಏನ್! ಅವನ ಗಾಂಭೀ

ರ್ಷ ಅವನ ಕಡೆಗಣ್ಣಿನ ನೋಟಕ್ಕೆ ಸೋತು ಹೋಗಿರುವೆ. ಅವನ ಪ್ರೇಯಸಿಯಾಗಿ ಅಬ್ಬಾ 15 ದಿವಸಗಳ ಕಾಲ ಹಗಲು ರಾತ್ರಿಯನ್ನದೆ ಪ್ರೇಮದ ತೊಟ್ಟಿಲಲ್ಲಿ ಪ್ರೇಮದ ಅಲೆಯನ್ನ ಯಬ್ಬಿಸುವೆ.

**ಹುಡುಗರು** – ಅಮ್ಮಾ ಅಮ್ಮಾ.

**ಕಾಂಚನ** – ಬಾರೋ ಚಂದ್ರ ಶಾಲೆಗೆ ವೇಳೆಯಾಗಿಲ್ಲವೆ. ಊಟದ ಬಾಕ್ಸ್ ಆಗಲೇ ರೆಡಿ ಮಾಡಿದ್ದೇನೆ. ತೆಗೆದುಕೊಂಡು ಹೋಗಿ.

**ಸುಧಾ** – ಅಮ್ಮಾ ಹೊಟ್ಟೆ ಬಹಳ ಹಸಿದಿದೆಯಮ್ಮಾ ನಾನು ಇಲ್ಲಿಯೇ ಊಟ ಮಾಡಿ ಹೋಗುತ್ತೇನಮ್ಮ

**ಉವರಾಚಂದ್ರ** – ಇರಲಿ ಬಾರೆ ಸುಧಾ. ಅಲ್ಲಿಯೇ ಊಟ ಮಾಡೋಣ ಬಾ ಶಾಲೆಗೆ ಆಗಲೆ ಹೊತ್ತಾಗಿದೆ ಗುರುಗಳು ಬೈತಾರೆ.

**ಸುಧಾ** – ಅಣ್ಣ ನಾನು ವಲ್ಲೆ ಹೋಗು ನಾನು ಈದಿನ ಶಾಲೆಗೆ ಬರುವುದಿಲ್ಲ.

**ಕಾಂಚನ** – [ಸುಧಾಳಿಗೆ ಹೊಡೆದು] ಇರಲಿ ಹೋಗು ಬಾರೆ ಮನೆಯಲ್ಲಿ ಕುಳಿತು ಭಜನೆ ಮಾಡಬೇಕೆಂದಿರುವೇನು

**ಉವರಾಚಂದ್ರ** – ಅಮ್ಮಾ ತಂಗಿಯನ್ನು ಒಡೆಯ ಬೇಡಮ್ಮ !! ನಾನೆಲ್ಲ ಕರೆದುಕೊಂಡು ಹೋಗುತ್ತೇನೆ. ಏ ಸುಧಾ ಬಾರೆ ನಿನಗೆ ಚಾಕ್ಲೇಟ್ ಕೊಡುಸ್ತಿನಿ ಬಾ.

[ಸುಧಾ ಅಳುವಳು] [ಕಾಂಚನ ಒಳಗಿನಿಂದ ಕ್ಯಾರಿಯರ್ ತರುವಳು]

**ಉವರಾಚಂದ್ರ** – ಅಳಬೇಡ ಸುಮ್ಮನಿರೆ ಸುಧಾ.

**ಕಾಂಚನ** – ತೆಗೆದುಕೊಳ್ರಿ ಕ್ಯಾರಿಯರ್. ಶಾಲೆ ಬಿಟ್ಟ ನಂತರ ಮನೆಗೆ ಓಡಿ ಬರಬೇಡ್ರಿ. ಅಲ್ಲೆ ಮಕ್ಕಳ ಜತೆಗೆ ಒಂದು ಗಂಟೆ ಆಟವಾಡಿ ಬನ್ನಿರಿ.

**ಉವರಾಚಂದ್ರ** – ಹಾಗೆ ಆಗಲಮ್ಮ [ಮಕ್ಕಳು ಹೋಗುವರು]

**ಕಾಂಚನ** – ನಮ್ಮ ರಸಿಕತೆಯ ರಸಲೀಲೆಗೆ ಈ ಮಕ್ಕಳೊಂದು ಅಡ್ಡವಾಗಿವೆ. ನನ್ನ ಗಂಡ ಮೈಸೂರಿಗೆ ಹೋಗಿದ್ದು ಒಳ್ಳೆಯದೇ ಆಯಿತು ಎಂದು ಕೊಂಡರೆ ನನ್ನ ಜೀವಕ್ಕೆ ಇವೆರಡು ಮಕ್ಕಳು ಮೂಲವಾಗಿ ಕುಳಿತಿವೆ ಯಾವುದಾದರೊಂದು ಬೇನೆ ಬಂದು ಎಂದು ಸಾಯುತ್ತವೆಯೋ ಏನೋ? ಇವೆರಡು ಹುಡುಗರು ಸತ್ತು ಹೋಗಿಬಿಟ್ರೆ ನಾನು ವಿಶ್ವಚಂದ್ರನ ಮೋಹದ ಮಡಿಲಲ್ಲಿ ಮುಳುಗಿ ತೇಲಾಡುವೆ. ಅಬ್ಬಾ ಅಯ್ಯೋ ವಿಶ್ವಚಂದ್ರ ಇನ್ನು ಬರಲಿಲ್ಲವಲ್ಲ?

[ ವಿಶ್ವಚಂದ್ರ ಹೊರಗಿನಿಂದ ಬಂದು ]

**ವಿಶ್ವಚಂದ್ರ** – ಬಂದೆ ರಾಣಿಸಾಹೇಬ್ ಮೈಸೂರಿಗೆ ಹೋಗುವ ಬಸ್ಸು ಕಾರಣಾಂತರದಿಂದ ಲೇಟಾಗಿ ಬಂದುದರಿಂದ ನಾನು ಲೇಟಾಗಿ ಬರಬೇಕಾಯಿತು.

**ಕಾಂಚನ** – ಹೋದರೆ? ನಿಮ್ಮ ಅಣ್ಣಂದಿರೂ

**ವಿಶ್ವಚಂದ್ರ** – ಹೊದರೆಂದು ಕೇಳುವೆಯಲ್ಲಾ ಬಸ್ ಹತ್ತಿಸಿ ಬಂದಿರುವೆನು. ಅದು ಇರಲಿ ಸುಧಾ ಚಂದ್ರರು ಶಾಲೆಗೆ ಹೋಗಿರುವರೆ?

**ಕಾಂಚನ** – ಹೋಗದಿದ್ದರೆ ನಾನೆಲ್ಲ ಕೇಳುತ್ತೇನೆ. ನನ್ನ ನಿನ್ನ ಪ್ರೀತಿಗೆ ಅಡ್ಡಿ ಬರುತ್ತಾರೆಂದು ಇಂದು ಊಟವನ್ನು ಸಹ ಮಾಡಿಸದೆ ಶಾಲೆಗೆ ಅಟ್ಟಿರುವೆನು. ಮತ್ತು ಶಾಲೆ ಬಿಟ್ಟ ಮೇಲೆ ಬೇಗನೆ ಬಾರದಂತೆ ತಿಳಿಸಿರುವೆನು.

**ವಿಶ್ವಚಂದ್ರ** – ಕಾಂಚನ ನನ್ನ ನಿನ್ನ ಈ ಹೃದಯದ ಸಂಭಂಧದ ಬೆಸುಗೆ ಎಂದೆಂದಿಗು ಸಡಿಲದಂತೆ ಮೈ ಭಾರವಾದ ಕಾದ ಕಬ್ಬಿಣದ ರಸಕ್ಕೆ ನಮ್ಮಿರ್ವರ ಕಾಮದ ಯರಕ ಸಡಿಲದಂತೆ ಬೆಸೆಯೋಣ.

**ಕಾಂಚನ** – ವಿಶ್ವಚಂದ್ರ ಈ ಭೂಮಿ ಬಿರಿದು ಬಾಯಿಬಿಟ್ಟರು ನಾನು ಮಾತ್ರ ನಿನ್ನನ್ನು ಬಿಟ್ಟಿರಲಾರೆ.

**ವಿಶ್ವಚಂದ್ರ** – ಅಲ್ಲ ಕಾಂಚನ, ನಾನು ಬಂದು ಎರಡು ವಾರಗಳು ಕೂಡ ಆಗಿಲ್ಲ. ನಿನ್ನ ಭಾವನೆ ಅದೆಷ್ಟು ನಿರ್ಧಾರಕ್ಕೆ ಬಂದಿರುವುದಲ್ಲ! ಇವನ್ನೆಲ್ಲ ತಿಳಿದು ನೋಡಿದರ 12 ವರ್ಷಗಳ ಕಾಲ ನಿನ್ನ ಗಂಡನ ಬಳಿಯಲ್ಲಿ ಅದು ಹೇಗೆ ನೆಮ್ಮದಿಯಿಂದ ಕಾಲ ಕಳೆದೆ?

**ಕಾಂಚನ** – ವಿಶ್ವಾ! ನಿಮ್ಮ ಮಾತಿನ ಅರ್ಥ ನೋಡಿದರೆ ನಾನು ಈಗಾಗಲೇ ಇನ್ನೊಬ್ಬರಿಗೆ ಮೈ ಒಪ್ಪಿಸಿರುವೆನೆಂದು ನಿಮ್ಮ ಭಾವನೆಯೇ?

**ವಿಶ್ವಚಂದ್ರ** – ಛೆ! ಛೆ! ಎಂಥಹ ಮಾತನ್ನು ಆಡುವೆ.

**ಕಾಂಚನ** – ನಿಮ್ಮ ಮನ ಮೆಚ್ಚುವಂತ ಮಾತನ್ನೇ ಆಡಿರುವೆ. ಏಕೆಂದರೆ ನಾನು ನಿಮಗೆ ಮನ ಸೋತಿರುವನು. ಅದನ್ನು ನೀವು ಅರಿತು ಕೊಂಡು ನಾನು ಇನ್ನೊಬ್ಬರಿಗೆ ಮೈ ಒಪ್ಪಿಸಿರಬಹುದೆಂದು ನೀವು ತಿಳಿದು ಕೊಂಡಿರುವುದು ಸಹಜ.

**ವಿಶ್ವಚಂದ್ರ** – ರಸಿಕತೆಯ ರಾಣಿಯರಲ್ಲಿ ಮೊದಲನೆಯವಳು ನೀನೆ ಇರಬೇಕು. ಅಂತಿಯೇ ಅನುಭವದ ಮುತ್ತುಗಳನ್ನೇ ಆಡುತ್ತಿರುವಿ.

**ಕಾಂಚನ** – ನನ್ನ ಅನುಭವದ ಮುತ್ತುಗಳನ್ನು ಅರಿತುಕೊಂಡು ನಡೆವರೆ ನಿಮ್ಮ ಬಾಳು ನಂದನ ವನದಂತಾಗುತ್ತದೆ. ಅದನ್ನು ಅರಿಯದೆ ನಡೆವರೆ ಸ್ಮಶಾನ ಸೇರುತ್ತದೆ.

**ವಿಶ್ವಚಂದ್ರ** – ಕಾಂಚನ ಸ್ಮಶಾನ ಸೇರುವಂತ ಮಾತನ್ನು ಬಿಟ್ಟು ಸೂರ್ಯಚಂದ್ರರಾಗಿ ಪ್ರಕಾಶವನ್ನೆ ಬೆಳಗಿಸೋಣ.

**ಕಾಂಚನ** – ವಿಶ್ವ ಕುಸುಮ ಅರಳಿ ನಗುತಿರಲು ದುಂಬಿ ಚುಂಬಿ-ಸದೇನು?

**ವಿಶ್ವಚಂದ್ರ** – ಗಾಳಿ ಸಂಪು ಬೀಸಿರಲು ಸುಮಧು ಗಂಧ ತೀಡಲೇನು? ಸಂಪು ತಂಪು ಕೂಡಿರಲು ಮೊಗ್ಗು ಮಲ್ಲಿಗೆ ಅರಳದೇನು? ಮುಡಿದ ಮಲ್ಲಿಗೆ ಬಾಡುವ ಮೊದಲು ಅದರ ಸವಿಯ ಸವಿಯಲೇನು? [ಕೆನ್ನೆ ತಟ್ಟುವನು]

— ಹಾಡು

ಗಂಡು – ಹೇ........... ಹೇ........... ಹೇ...........
ಊ ಹೂ........... ಓ ಹೊ...........
ನಿನ ಕಣ್ಣಿನ ಮಿಂಚಿನ ಹೂ ಬಾಣ !
ನಾಟಿದೆ ಈ ಮನಕೆ ಜಾಣೆ !
ಸಂತೈಸದೇ........... ನೀ ನಿಂತರೆ ;
ತಾಳೆನು........... ಈ ನೋವನು ! .......
ಬಳಿಬಾರೆ........... ಓ ಚಲುವೆ ! .......

ಹೆಣ್ಣು – ಈ ಪ್ರೇಮ ನಾನೆಂದು ಕಾಣೆ !
ನಾ ಸೋತೆ ನೀ ಚಲುವ ಜಾಣ !
ಸಂತೈಸುವೆ........... ಮುದ್ದಾಡುವೆ !
ಆನಂದದಿ........... ನಿನ್ನ ಬಿಗಿದಪ್ಪುವೆ !
ಐ ಲವ್ ಯು........... ಐ ಲವ್ ಯು

ಗಂಡು – ಮುಟ್ಟಿದರೆ ಮಾಸುವುದು ಆ ಮೈಯೆಮಾಟ !
ಗೊತ್ತಿರದೆ ಸೃಷ್ಟಿಸಿದ ಆ ಬ್ರಹ್ಮನಾಟ !

ಹೆಣ್ಣು – ಸಾಗಲಿ ಅನುದಿಸವು ಈ ಪ್ರೇಮದಾಟ !
ತೋರಿಸು ನಿನ್ನಯ ಆ ಕುಡಿನೋಟ !

॥ ನಿನ್ನಕಣ್ಣು ॥

**ವಿಶ್ವಚಂದ್ರ** – ಕಾಂಚನ ಮಧುಮಂಚ ಕಾದಿದೆ

**ಕಾಂಚನ** – ಕೆನ್ನೆ ಕೆಂಪಾಗಿದೆ

**ವಿಶ್ವಚಂದ್ರ** – ಮನವು ಹಂಬಲಿಸಿದೆ

**ಕಾಂಚನ** – ಸುಮವು ಅರಳಿ ನಿಂತಿದೆ

**ವಿಶ್ವಚಂದ್ರ** – ಮನವು ಸರಸಕ್ಕಾಗಿ ಕಾತರಿಸುತ್ತಿದೆ,

[ ಇಬ್ಬರು ಮಂಚದ ಮೇಲೆ ತುಂಬಾ ಹೊದ್ದು ಕೊಂಡು ಮಲಗಿರುವಾಗ ಬೆಳಕು ಮಂದವಾಗುವುದು. ಅಷ್ಟರಲ್ಲಿ ಮಕ್ಕಳು ಬರುವರು ]

**ಸುಧಾ** – ಅಮ್ಮಾ ಅಮ್ಮಾ ಈ ದಿವಸ ಶಾಲೆ ರಜ ಬಿಟ್ಟಿದೆಯಮ್ಮಾ ಏಕೆಂದರೆ ನಮ್ಮ ಭಾಗದ M.L.A. ಯವರು ನಿಧನ ಹೊಂದಿದ್ದಾರೆ ಅದಕ್ಕಾಗಿ ಬೇಗನೇ ಬಂದೆವಮ್ಮಾ.

**ಉಮಾಚಂದ್ರ** – ಏ, ಸುಧಾ ಅಮ್ಮಾ ಮಲಗಿದ್ದಾಳೆ. ಅಪ್ಪಾಜಿಯು ಬಂದಿದ್ದಾರೆ. ನಿದ್ರೆ ಭಂಗ ಮಾಡುವುದು ಬೇಡ. ಹೊಟ್ಟೆ ಹಸಿದಿದೆ. ನಾವೇ ಬಡಿಸಿಕೊಂಡು ಊಟ ಮಾಡುವ ಬಾ,

**ಸುಧಾ** – ಊ ಊ ನಾನು ಒಲ್ಲೆಣ್ಣ ನಾನು ಅಪ್ಪಾಜಿ ಸಂಗಡನೆ ಊಟ ಮಾಡುವೆ.

ಉಮಾಚಂದ್ರ – ಏ, ಸುಧಾ ಸುಮ್ಮನೆ ಬಾರೆ ಅಪ್ಪ – ಅಮ್ಮ ಮಲಗಿರುವಾಗ ಎಬ್ಬಿಸಬಾರದು ಕಣೆ.

**ಸುಧಾ** – ಅದಕ್ಕೇನು ಆಗುತ್ತೆ ಅಣ್ಣ. ನಾನು ಅಪ್ಪಾಜಿಯನ್ನು ಎಬ್ಬಿಸಿ ಅವರ ಸಂಗಡನೆ ನಾನು ಊಟ ಮಾಡುತ್ತೇನೆ.

[ ಅಪ್ಪಾಜಿ ಎಂದು ವಿಶ್ವಚಂದ್ರನ ಹೊದಿಕೆ ಎಳೆಯುವರು ]

ಉಮಾಚಂದ್ರ – [ಆಘಾತದಿಂದ] ಇದೇನಮ್ಮ ನಾವು ನೋಡುತ್ತಿರುವುದು.

**ಸುಧಾ** – ಅಮ್ಮಾ ಇದೇನಮ್ಮಾ ಅಪ್ಪಾಜಿ ಮಲಗುವ ಜಾಗದಲ್ಲಿ ಚಿಕ್ಕಪ್ಪನನ್ನು ಮಲಗಿಸಿಕೊಂಡಿರುವಿಯಲ್ಲಾ.

**ಕಾಂಚನ** – ಮುಚ್ಚು ಬಾಯಿ ಅದೇನೆ ಇರಲಿ ಸುಮ್ಮನೆ ಒಳಗಡೆ ಹೋಗಿರಿ. ಈ ಸುದ್ದಿ ಏನಾದರೂ ನಿಮ್ಮ ತಂದೆಯವರಿಗೆ ತಿಳಿಸಿದರೆ ನಿಮ್ಮ ಪ್ರಾಣವನ್ನ ತೆಗೆಯುತ್ತೇನೆ ಜೋಕೆ? ಹೂ. ಒಳಗಡೆ ಹೋಗಿ.

[ ಮಕ್ಕಳನ್ನು ಹೊಡಿಯುವಳು ]

ಉಮಾಚಂದ್ರ – ಉ. ಹೊಡಿಯಮ್ಮ ಹೊಡೆ. ಊರಲ್ಲಿ ಗಂಡ ನಿಲ್ಲದಾಗ ನೀನು ಮಿಂಡನ ಜೊತೆ ಮಲಗಿರುವುದನ್ನು ನಾವು ನೋಡಿರುವೆವೆಂದು ನಿನಗೆ ಸಿಟ್ಟು ಬಂದಿದೆಯೇನಮ್ಮಾ.

**ಕಾಂಚನ** – ಬಾಯಿ ಮುಚ್ಚು ಚಂದ್ರ ನನ್ನ ಹೊಟ್ಟೆಯಲ್ಲಿ ಹುಟ್ಟಿದ ಕೂಸು ನೀನು. ಹೆಚ್ಚಿಗೆ ಮಾತನಾಡಿದರೆ ಕತ್ತನ್ನೆ ಹಿಚುಕುವೆನು.

ಉಮಾಚಂದ್ರ – ನಿನ್ನಂಥಹ ಹಾದರದ ಹೊಟ್ಟೆಯಲ್ಲಿ ಹುಟ್ಟುವು-ದಕ್ಕಿಂತ ಒಂದು ಬೀದಿ ನಾಯಿಯ ಹೊಟ್ಟೆಯಲ್ಲಿ ಹುಟ್ಟಿದ್ದರೆ ಎಷ್ಟೊ ಚೆನ್ನಾಗಿತ್ತು.

**ಕಾಂಚನ** – ಸುಮ್ಮನೆ ಬಾಯಿ ಮುಚ್ಚಿಕೊಂಡು ಒಳಗೆ ಹೋಗು.

ಉಮಾಚಂದ್ರ – ಅಮ್ಮ ಇಷ್ಟೆಲ್ಲಾ ಹೇಯವಾದ ಕಾರ್ಯ ಮಾಡಿ ನಿನ್ನೆದುರು ನಮ್ಮನ್ನು ಇರಿಸಿಕೊಳ್ಳುವುದಕ್ಕಿಂತ ನಮ್ಮ ಕತ್ತನ್ನು ಹಿಚುಕಿ ಬಿಡಮ್ಮ.

**ಕಾಂಚನ** – ಹೇ, ಸುಮ್ಮನೆ ಒಳಗಡೆ ಹೋಗಿ ಕೂಳು ತಿಂದು ಬಿದ್ದುಕೊಳ್ಳಿರಿ [ ಹೊಡೆಯುವಳು ]

**ಸುಧಾ** – ಅಣ್ಣ ಹೊಟ್ಟೆ ಬೆಹಳ ಹಸಿದಿದೆ ಬಾ ಅಣ್ಣ ಊಟ ಮಾಡೋಣ.

ಉಮಾಚಂದ್ರ – ಸುಧಾ ಅಪ್ಪಾಜಿ ಮನೆಗೆ ಬರುವವರೆಗೂ ಈ ಮನೆಯಲ್ಲಿ ಊಟವಷ್ಟೆಅಲ್ಲ ಒಂದು ತೊಟ್ಟು ನೀರನ್ನು ಸಹ ಮುಟ್ಟು-ವುದೇ ಬೇಡಮ್ಮ,

**ಸುಧಾ** – ಅಣ್ಣ ನನಗೆ ಹಸಿವೆಯಾಗಿದೆಯಣ್ಣ.

ಉಮಾಚಂದ್ರ – ಸುಧಾ! ಈ ಪಾಪಿ ಕೈಯಿಂದ ಮಾಡಿದ ಅಡಿಗೆ ಉಣ್ಣುವುದಕ್ಕಿಂತ ನಾವು ಉಪವಾಸ ಸತ್ತರು ಚಿಂತೆಇಲ್ಲ, ಅಪ್ಪಾಜಿ ಬರುವ ವರೆಗೂ ಹಾಗೆಯೇ ಮಲಗೋಣ ಬಾರಮ್ಮ.

[ ಹುಡುಗರು ಒಳಗೆ ಹೋಗುವರು ]

**ವಿಶ್ವಚಂದ್ರ** – ಕಾಂಚನ ಎಂತಹ ಅನಾಹುತವಾಯಿತಲ್ಲ ನಮ್ಮಿಬ್ಬರ ಪ್ರೇಮ ಮಿಲನವು ಬಹಿರಂಗಕ್ಕೆ ತೋರದಂತೆ ನಡೆದು ಕೊಳ್ಳಬೇಕೆಂದು ಅದೆಷ್ಟು ಪ್ರಯತ್ನಿಸಿದರೂ ಇಂದು ಅನಾಹುತದ ಆಹುತಿಗೆ ಸಿಕ್ಕು ಬಿದ್ದೆವಲ್ಲ ಈಗೇನು ಮಾಡಬೇಕು ?

**ಕಾಂಚನ** – ಅಯ್ಯೋ! ವಿಶ್ವ ಇಷ್ಟಕ್ಕೆ ಹೆದರುವುದೇ. ಎಂತಹ ಅನಾಹುತ ಬಂದರೂ ಧೈರ್ಯದಿಂದ ಇರಬೇಕು. ಧೈರ್ಯವೇ ಮಾನವನ ಬಾಳಿಗೆ ಒಂದು ಚೇತನ! ಅಧೈರ್ಯ ಪಡದಿರು ನಾನಿರುವತನಕ.

**ವಿಶ್ವಚಂದ್ರ** – ನೀನೇ ಧೈರ್ಯದಿಂದ ಇರುವಾಗ ನನಗೆ ಎಲ್ಲಿಂದ ಬರಬೇಕು ಭಯ, ಆದರೂ ನಿನ್ನ ಗಂಡ ಮರಳಿ ಬರುವುದರೊಳಗಾಗಿ ಈ ಸುದ್ದಿ' ಅವನಿಗೆ ತಿಳಿಯುದಂತೆ ಮಾಡಬೇಕು. ಆಗ ನಮ್ಮಿಬ್ಬರಿಗೂ ಭಯವಿರುವುದಿಲ್ಲ.

**ಕಾಂಚನ** – ಅದನ್ನು ಸರಿಮಾಡುವುದು ಎಷ್ಟೊತ್ತಿನ ಕೆಲಸ. ಸುಧಾ ಚಂದ್ರರಿಗೆ ತಿಳಿ ಹೇಳುವೆ. ಅವರ ತಂದೆಗೆ ನಮ್ಮ ವಿಷಯ ತಿಳಿಸ-ದಂತೆ ಮಾಡುವೆ ನೀನು ನಿಶ್ಚಿಂತೆಯಿಂದ ಇರು.

**ವಿಶ್ವಚಂದ್ರ** – ಕಾಂಚನ ನೀನು ತಿಳಿದುಕೊಂಡಂತೆ ಅಷ್ಟೊಂದು ಸುಲಭವಲ್ಲ ನಿನ್ನ ಮಗನಾದ ಚಂದ್ರನಿಗೆ ಈಗಾಗಲೇ ಹತ್ತು ವರ್ಷ ತುಂಬಿವೆ ಮೇಲಾಗಿ ನಿನ್ನ ಮಗನ ಛಲವನ್ನು ನೋಡಿದರೆ ನಿನ್ನ ಗಂಡನಿಗೆ ಈ ವಿಷಯವನ್ನು ತಿಳಿಸದೆ ಇರಲಾರನು. ಎಂಬ ನಂಬಿಕೆ ನನಗಿದೆ.

**ಕಾಂಚನ** – [ ಉಸಿರು ಹಾಕಿ ] ಇದಕ್ಕೆ ಯಾವ ಹಂಚಿಕೆಯನ್ನು ಹುಡುಕಬೇಕು ?

**ವಿಶ್ವಚಂದ್ರ** – ಹಂಚಿಕೆಗಳಿಗೇನು ಕೊರತೆ ಅದು ಈ ವಿಶ್ವಚಂದ್ರನಿಗೆ ಈ ವಿಶ್ವಚಂದ್ರನೆಂದರೆ ಇಡಿ ವಿಶ್ವದ ವಿರಾಟ ಸ್ವರೂಪವೇ ನಾನು. ನಾನು ಹಾಕಿದ ಹಂಚಿಕೆಗಳು ಎಂದೂ ನಿಷ್ಫಲವಾಗುವುದಿಲ್ಲ.

**ಕಾಂಚನ** – ಹಾಗಾದರೆ ನೀನೇ ಹುಡುಕು ಅಂತಹ ಹಂಚಿಕೆಯನ್ನು,

**ವಿಶ್ವಚಂದ್ರ** – ನೋಡು ಕಾಂಚನ ನಮ್ಮಿಬ್ಬರ ಭಾಂಧವ್ಯ ಕೊನೆಯು ವರೆಗೂ ಸಾಗಬೇಕಾದರೆ ನಾನು ಹಾಕಿದ ಹಂಚಿಕೆಗೆ ನಿನ್ನ ಸಹಕಾರ ತುಂಬಾ ಬೇಕು, ನೀನು ಇದಕ್ಕೆ ಅಧೈರ್ಯ ತಾಳಿದರೆ ನಮ್ಮಿಬ್ಬರ ಭಾಂಧವ್ಯ ಇಂದಿಗೆ ಕೊನೆಯಾಗುವುದು.

**ಕಾಂಚನ** – ಛೆ! ಛೆ! ನನ್ನ ಜೀವ ಹೋದರೂ ಚಿಂತೆಯಿಲ್ಲ ನಿಮ್ಮನ್ನಗಲಿ ನಾನು ಒಂದು ನಿಮಿಷ ಕೂಡ ಕಾಲ ಹರಣ ಮಾಡಲಾರೆ. ನೀವೇನು ಮಾಡಿದರೂ ಅದಕ್ಕೆ ನಾನು ಸಿದ್ಧಳಾಗಿರುವೆ.

**ವಿಶ್ವಚಂದ್ರ** – ಹಾಗಾದರೆ ವಚನ ಕೊಡು.

**ಕಾಂಚನ** – [ ಕೈ ಮೇಲೆ ಕೈ ಹಾಕಿ ] ತೆಗೆದುಕೊಳ್ಳಿ ವಚನ. ಯಾವ ಹಂಚಿಕೆಯನ್ನು ಹಾಕಿರುವಿರಿ ಮೊದಲು ತಿಳಿಸಿ,

**ವಿಶ್ವಚಂದ್ರ** – ಕಾಂಚನ, ಸುಧಾ ಹಾಗೂ ಚಂದ್ರುರನ್ನು ಕೊಲೆ ಮಾಡಿಸಬೇಕು!

**ಕಾಂಚನ** – [ ಗಾಬರಿಯಿಂದ ] ವಿಶ್ವ !!!

**ವಿಶ್ವಚಂದ್ರ** – ಹಾ. ಗಾಬರಿ ಪಡಬೇಡ ನಾವು ಉಳಿದುಕೊಳ್ಳಲು ಇದು ಒಂದೇ ಒಂದು ಉಪಾಯ ಇದನ್ನು ನಾವು ಮಾಡದಿದ್ದರೆ ನಮಗೆ ಬರುವುದು ಅಪಾಯ ನೀನು ಮಾತ್ರ ಹೆದರದೆ ಧೈರ್ಯದಿಂದ ಇರು. ಈ ಎರಡು ಮಕ್ಕಳು ಹೋದರೆ ಏನಾಗುತ್ತದೆ ನಮ್ಮಿಬ್ಬರ ಪ್ರೀತಿಗೆ ಆತಂಕ ಬರದಿದ್ದರೆ ಇಂತಹ ಹತ್ತು ಮಕ್ಕಳನ್ನು ಹೆರಬಹುದು.

**ಕಾಂಚನ** – [ ದುಃಖದಿಂದ ಅಳುವಳು ] ಈ ಒಂದು ಮಾತನ್ನು ಬಿಟ್ಟು ಬೇರ ಏನು ಹೇಳಿದರೂ ನಿನ್ನಮಾತಿನಂತೆ ನಡೆದುಕೊಳ್ಳುತ್ತೇನೆ. ಆದರೆ ಸುಧಾ ಚಂದ್ರುರನ್ನು ಕೊಲೆ ಮಾಡುವುದು ಬೇಡ, ಬೇಡ, ಬೇಡ.

**ವಿಶ್ವಚಂದ್ರ** – [ ಸಿಟ್ಟಿನಿಂದ ] ಕಾಂಚನ ಏಕೆ ಚೀರುತ್ತಿರುವೆ ನಾನು ಒಮ್ಮೆ ನಿರ್ಧಾರ ತೆಗೆದುಕೊಂಡರೆ ಮುಗಿದೇ ಹೋಯಿತು. ಮೇಲಾಗಿ ನೀನು ವಚನ ಕೊಟ್ಟಿರುವೆ ವಚನದಂತೆ ನಡೆದು ಕೊಳ್ಳುವೆಯೋ ಅಥವಾ ನನ್ನನ್ನೇ ಮನೆಯಿಂದ ಹೊರ ಹಾಕುವೆಯೋ ಆಲೋಚನೆ ಮಾಡು.

**ಕಾಂಚನ** – ಆಲೋಚನೆ ಮಾತು ಎಲ್ಲಿಂದ ಬಂತು ವಿಶ್ವ. ನಿನ್ನ ಇಚ್ಛೆ ಹೇಗಿದೆಯೋ ಹಾಗೆ ಮಾಡು ನಾನು ಬೇಡವೆಂದರೂ ನೀನು ಕೇಳುವ

ಸ್ಥಿತಿಯಲ್ಲಿಲ್ಲ ಮೇಲಾಗಿ ನಾನು ನಿನ್ನನ್ನು ದೂರ ಮಾಡುವಂತೆಯೂ ಇಲ್ಲ ಅಂತಹ ಸಂದರ್ಭದಲ್ಲಿ ಸಿಲುಕಿಕೊಂಡಿರುವೆ, ಮಾಡುವುದೇನು ನನ್ನ ಜೀವನದಲ್ಲಿ ಏನಿದೆಯೋ ಹಾಗೆಯೇ ನಡೆದುಹೋಗಲಿ.

**ವಿಶ್ವಚಂದ್ರ** – ಹೀಗೇಕೆ ಅಧೈರ್ಯದಿಂದ ಮಾತನಾಡುತ್ತಿರುವೆ. ಕಾಮದ ತೃಷೆಯ ಹೊಡೆತಕ್ಕೆ ತಡೆಯುದೆ ಅಣ್ಣನ್ನಾರೋ? ತಮ್ಮನ್ನಾರೋ? ಮೈದುನನ್ನಾರೋ ? ಅದನ್ನರಿಯದೇ ಕಾಮದ ರಸಲೀಲೆಯಲ್ಲಿ ಬಿದ್ದು ಒದ್ದಾಡುವರೆಲ್ಲಾ ನಿನ್ನಂತಹ ಕನ್ಯೆ ಕುಮಾರಿಯರಿಗೆ ಇಂತಹ ಸಂದರ್ಭಗಳು ಬರುವುದು ಸಹಜ. ಕಾಂಚನ ಏಕೆ ದುಃಖಿಸುವೆ ಕಾಮದಾಟಕ್ಕೆ ಬಲಿಯಾದವರು ಮಕ್ಕಳನ್ನು ಕೊಲೆ ಮಾಡಲು ಹೆದರಬಾರದು ಎಲ್ಲದಕ್ಕೂ ಸಿದ್ಧವಾಗಿದ್ದರೆ ಮಾತ್ರ ಇಂತಹ ಕೆಲಸಕ್ಕೆ ಕೈ ಹಾಕಬೇಕು.

**ಕಾಂಚನ** – [ ಕೂದಲು ಹರಡಿಕೊಂಡು ದುಃಖಿಸುತ ] ವಿಶ್ವ ! ವಿಶ್ವ !! ವಿಶ್ವ !!!

**ವಿಶ್ವಚಂದ್ರ** – ಏಕೆ ಹಾಗೆ ದುಃಖಿಸುವೆ ತಡ ಮಾಡದೆ ಮುಂದಿನ ಕಾರ್ಯವನ್ನು ನೀನು ನಡೆಸು ನಾನು ಈಗಲೇ ಹೋಗಿ ದರೋಡೆ ಕೋರರನ್ನು ಕರೆದುಕೊಂಡು ಬರುವೆ ಅವರು ಬರುವುದರೊಳಗಾಗಿ ನಿನ್ನ ಮಕ್ಕಳ ಪ್ರೀತಿ ಪ್ರೇಮ ಎಷ್ಟಿದೆಯೋ ಅದನ್ನೆಲ್ಲಾ ತೀರಿಸಿಕೋ.

[ ಹೋಗುವನು ]

**ಕಾಂಚನ** – ಅಯ್ಯೊ ದೇವರೇ ಎಂತಹ ಅನಾಹುತಕ್ಕೆ ಈಡಾದೆನಲ್ಲ ವಿಶ್ವಚಂದ್ರನ ಮೈಮಾಟಕ್ಕೆ ಮನ ಸೋತು ಪ್ರೇಮದ ಅಲೆಗಳನ್ನೆ ಎಬ್ಬಿಸಿದ ಕೆಲವೇ ದಿನಗಳಲ್ಲಿಯೇ ಸಂತೋಷ, ದುಃಖ ಇದನ್ನೆಲ್ಲಾ ಕಾಣಬೇಕಾಯಿತು. ತಾನೊಂದು ಬಗೆದರೆ ದೈವ ಒಂದು ಬಗೆಯಿತು ಎಂಬಂತೆ ಆಯಿತು ನನ್ನ ಸ್ಥಿತಿ. ವಿಶ್ವಚಂದ್ರನು ಮಹಾ ಕಟುಕನು. ಈಗ ಅವನನ್ನು ದೂರ ಮಾಡಿದರೆ ನನ್ನ ಪ್ರಾಣವನ್ನು ತೆಗೆಯುವುದಕ್ಕೂ ಹೇಸುವುದಿಲ್ಲ ನನ್ನ ಉಪಾಯಗಳು ಈಗ ಯಾವುದಕ್ಕೂ ಉಪಯೋಗವಾಗುವುದಿಲ್ಲ.

ನಡೆಯಲಿ ವಿಶ್ವಚಂದ್ರನ ಛಲವೇ ನಡೆಯಲಿ ಮಕ್ಕಳು ಮರಣ ಹೊಂದಿ-ದರೂ ಚಿಂತೆಯಿಲ್ಲ ವಿಶ್ವಚಂದ್ರನ ಮೇಲೆ ನನ್ನ ಮಮತೆ ಎಂದೆಂದಿಗೂ ಮರೆಯುವಂತಿಲ್ಲ ಇವನನ್ನು ಬಿಟ್ಟರೆ ಮುಂದಿನ ದಾರಿ ನನಗೆ ಸಿಗುವಂತಿಲ್ಲ.

[ ಅಷ್ಟರಲ್ಲಿ ವಿಶ್ವಚಂದ್ರನ ಜೊತೆ ಪ್ರತಾಪ್‌ಸಿಂಗ್, ದುರೋಡೆಸಿಂಗ್ ಕೊಲೆ ಮಾಡಲು ಆಯುಧಗಳನ್ನು ಹಿಡಿದು ಬರುವರು ]

**ವಿಶ್ವಚಂದ್ರ** – ಹೂ ಕಾಂಚನಾ ಮಕ್ಕಳನ್ನು ಕರೆದುಕೊಂಡು ಬಾ.

**ಕಾಂಚನ** – ಆ ಕೆಲಸವು ಸಹ ನನ್ನಿಂದಾಗಬೇಕೆ?

**ವಿಶ್ವಚಂದ್ರ** – ಹು ನಿನ್ನಿಂದಲೇ ಆಗಬೇಕು. ಆ ಕರ್ಮವನ್ನು ನಾನೇಕೆ ಹೊತ್ತುಕೊಳ್ಳಲಿ. ಹು ಕರೆದುಕೊಂಡು ಬಾ ನಿನ್ನ ಮಕ್ಕಳನ್ನು ತಡ ಮಾಡಿದರೆ ಇಡಿ ಊರಿಗೆ ತಿಳಿಯುವುದು ಈ ಸುದ್ದಿ.

**ಕಾಂಚನ** – [ ದುಃಖಿಸುತ್ತ ] ಅಯ್ಯೋ ದೈವವೇ

**ಪ್ರತಾಪ್‌ಸಿಂಗ್** – ವಿಶ್ವಚಂದ್ರರೇ ಅಳುವುದನ್ನೆ ಮುಂದು ವರಿ-ಸುವಿರೋ ಅಥವಾ ಹುಡುಗರನ್ನು ಕರೆತರುವಿರೋ.

**ದರೋಡೆಸಿಂಗ್** – ಏ ಪ್ರತಾಪ್‌ಸಿಂಗ್ ಇವರ ಜೊತೆ ಒಳ್ಳೆಯ ಸ್ನೇಹ ಮಾಡಿರುವಿ ಇಂತಹ ಕೆಲಸಗಳು ನಮಗೆ ಸಾಕಷ್ಟು ಇವೆ, ಕೇವಲ ಹುಡುಗರನ್ನು ಕೊಲೆ ಮಾಡಲು ಇಷ್ಟು ತಡಮಾಡಿದರೆ ಹೇಗೆ.

**ವಿಶ್ವಚಂದ್ರ** – ಕಾಂಚನ ಹುಚ್ಚಿಯ ಹಾಗೆ ಏಕೆ ನಿಂತಿರುವಿ. ತಡ-ಮಾಡದೆ ಹುಡುಗರನ್ನು ಕರೆದುಕೊಂಡು ಬಾ.

**ಕಾಂಚನ** – ಆಗಲಿ ಕರೆದುಕೊಂಡು ಬರುತ್ತೇನೆ.

[ ಕಾಂಚನ ಒಳಗೆ ಹೋಗುವಳು ]

**ವಿಶ್ವಚಂದ್ರ** – ಪ್ರತಾಪ್‌ಸಿಂಗ್, ದರೋಡೆಸಿಂಗ್

**ಇಬ್ಬರು** – ಏನು ವಿಶ್ವಚಂದ್ರರೇ!

**ವಿಶ್ವಚಂದ್ರ** – ಈ ಎರಡು ಹುಡುಗರನ್ನು ನಿಮ್ಮ ಸ್ಥಳದಲ್ಲಿ ಕೊಲೆ

ಮಾಡಿರಿ. ಕೊಲೆ ಹೇಗೆ ಮಾಡಬೇಕು ಗೊತ್ತೆ ಕಟುಕ ಕರುಣೆ ಇಲ್ಲದೆ ಕುರಿಯನ್ನು ಹೇಗೆ ಕಡಿಯುತ್ತಾನೋ ಅದರಂತೆ ನೀವು ಈ ಹುಡುಗರನ್ನು ತುಂಡು ತುಂಡಾಗಿ ಕಡಿದು ಒಂದು ಚೀಲದಲ್ಲಿ ತುಂಬಿ ಹೊಳೆದಂಡೆಯಲ್ಲಿ ಹುಗಿಯಬೇಕು. ನಾಲ್ಕೆ ದಿನದಲ್ಲಿ ಕೊಳೆತು ಹೋಗುತ್ತದೆ. ಅವರ ತಂದೆ ಬಂದು ಹುಡುಕಿದರೂ ಸಿಗದಂತೆ ಆಗುತ್ತದೆ.

**ಇಬ್ಬರು** – ನೀವು ಹೇಳಿದಂತೆ ಮಾಡುತ್ತೇವೆ. ಆದರೆ ನಮ್ಮ ಹಣ?

**ವಿಶ್ವಚಂದ್ರ** – ಆಗಲಿ ತೆಗೆದುಕೋ ಈ ಹತ್ತು ಸಾವಿರ ರೂಪಾಯಿಗಳು ಇಷ್ಟಕ್ಕೆ ತೃಪ್ತಿಯೋ ಅಥವಾ ಇನ್ನು ಹಣ ಬೇಕೇ,

[ ಹಣ ಕೊಡುವನು ]

**ದರೋಡೆಸಿಂಗ್** – ಈಗ ಸದ್ಯ ಇಷ್ಟೆ ಸಾಕು, ಕೆಲಸ ಮುಗಿದ ಮೇಲೆ ಇನ್ನಷ್ಟು ಕೊಡುವಿರಂತೆ.

**ವಿಶ್ವಚಂದ್ರ** – ಕಾಂಚನ ಕರೆದುಕೊಂಡು ಬಾ

[ ನಿದ್ರೆಯಲ್ಲಿ ಇರುವ ಚಂದ್ರನನ್ನು ಎತ್ತಿಕೊಂಡು ಬರುವಳು ]

**ಕಾಂಚನ** – ಇದೋ ತೆಗೆದು ಕೊಳ್ಳಿರಿ. [ ಪ್ರತಾಪ್‌ಸಿಂಗ್ ಚಂದ್ರನನ್ನು ಎತ್ತಿಕೊಳ್ಳುವನು ಚಂದ್ರ ಚೀರುವನು ]

**ಪ್ರತಾಪ್‌ಸಿಂಗ್** – ಇನ್ನೊಂದು ಮಗು ಕರೆದುಕೊಂಡು ಬಾ.

**ಕಾಂಚನ** – [ ಒಳಗೆ ಹೋಗಿ ಸುಧಾಳನ್ನು ಎತ್ತಿಕೊಂಡು ಬರುವಳು ಸುಧಾ ಅಪ್ಪ. ಅಮ್ಮ ಎಂದು ಚೀರುವಳು. ಧರೋಡೆಸಿಂಗ್ ಸುಧಾಳನ್ನು ಎತ್ತಿಕೊಳ್ಳುವನು. ]

**ವಿಶ್ವಚಂದ್ರ** – ಹುಂ ಇನ್ನು ಹೊರಡಿರಿ ನಿಮ್ಮ ಕೆಲಸವನ್ನು ತಡ ಮಾಡದೆ ಮಾಡಿರಿ.

**ಇಬ್ಬರು** – ಆಗಲಿ ಬರುತ್ತೇವೆ. [ ಹೋಗುವರು ]

**ಕಾಂಚನ** – ವಿಶ್ವ! ನಿನ್ನ ಮಾತಿನಂತೆ ನಾನು ಕೊಟ್ಟ ಮಾತನ್ನು

ನಡೆಸಿಕೊಂಡಿರುವೆ. ಇನ್ನು ಮುಂದೆ ನನಗೆ ಕೊಟ್ಟ ಮಾತಿನಂತೆ ನಡೆದು ಕೊಳ್ಳುವುದು ನಿನ್ನ ಕೈಯಲ್ಲಿದೆ,

**ವಿಶ್ವಚಂದ್ರ** - ಎಂತಹ ಮಾತನ್ನಾಡುವೆ ನನ್ನ ಸಲುವಾಗಿ ನೀನು ನಿನ್ನ ಮಕ್ಕಳನ್ನು ಕೊಲೆ ಮಾಡಲು ಹೆದರಲಿಲ್ಲ ಅಂದಮೇಲೆ ನಾನು ನಿನ್ನನ್ನು ಕೈ ಬಿಡುವುದಿಲ್ಲ.

**ಕಾಂಚನ** - ವಿಶ್ವ ರವಿ ಬಂದ ಮೇಲೆ ಸುಧಾ ಚಂದ್ರು ಎಲ್ಲಿ ಹೋಗಿರುವರೆಂದು ಕೇಳಿದರೆ ಏನು ಹೇಳುವುದು ?

**ವಿಶ್ವಚಂದ್ರ** – ಕಾಂಚನ ಈ ವಿಶ್ವಚಂದ್ರನ ಕಪಟ ನಾಟಕಕ್ಕೆ ಕೊನೆಯೇ ಇಲ್ಲ- ಮಂಚಿಕೆಗಳಿಗೇನು ಕೊರತೆ ನಿನ್ನ ಪತಿ ಬರುವುದರೊಳಗಾಗಿ ಸರಿಯಾದ ಹಂಚಿಕೆಯನ್ನೆ ಹುಡುಕುವೆ. ಅದರ ಬಗ್ಗೆ ನೀನು ಚಿಂತೆ ಮಾಡಬೇಡ. ಇನ್ನೇನು ಮಂಚವು ನಮಗಾಗಿ ಕಾದಿದೆ ಮನವು ತಣಿಯಲು ಹಂಬಲಿಸುತಿದೆ. ನಡೆ ಒಳಗೆ. [ ಇಬ್ಬರು ಒಳಗೆ ಹೋಗುವರು ]

## ಪ್ರವೇಶ ೭ [ ರಸ್ತಾ ]

[ ಕೆಂಪಿ ಬರುವಳು ]

**ಕೆಂಪಿ** – ಛೆ. ಛೆ. ಎಂಥಾ ಕಾಲ ಬಂತ್ರಿ ಯಪ್ಪಾ ಮಾಡಿದವರಿಗೆ ಬಿಟ್ಟು ಅಣಕಿನೋಡಿದವರಿಗೆ ಬಾತು ಅಂದಂಗ ನಮ್ಮಣ್ಣ ಮಾಡಿದ ಭಂಡ ಬಾಳೆವುಕ್ಕ ಪಾಪ ಆ ದಾಸನ್ನ ಪ್ರೋಲೀಸರು ಹಿಡುಕೊಂಡು ಹೋಗ್ಯಾರಂತ ದಾನಗ ಎಷ್ಟು ಹಿಂಸೆ ಕೊಟ್ಟಾರೋ ಏನೋ ಆದರಾಗ ಆ ಪ್ರೋಲೀಸರ ಕೈಗೆ ಸಿಕ್ಕರ ಕೇಳೋದೇನು ಆ ಮುಳುಗುಳು ಇಂತವ ಕಾದುಕೊಂಡು ಕುಳಿತಿರುತಾವ ತಪ್ಪು ಮಾಡಿದರೇನು ಮಾಡದಿದ್ದರೇನು ಹಿಡುಕೊಂಡು ಹೋಗಿ ತಮ್ಮ ರೂಮಿನ್ಯಾಗ ಹಾಕ್ಕೊಂಡು ಮೈ ಹಣ್ಣುಗಂಗ ಹೊಡಿ-

ತ್ಯಾವ. ನಾನ ಹೋಗಿ ಆ ದಾನನ್ನ ಬಿಡಿಸಿಕೊಂಡು ಬರಬೇಕಂತ ಮಾಡಿದ್ದೆ ಆ ಬೇವರ್ಸಿಗಳು ನನ್ನ ಮೈ ಮೆತ್ತಗಾಗಂಗ ಬಡದಾರು ಅಂತ ತಿಳಿದು ಅಂಜಿ ಸುಮ್ಮನೆ ಇರಬೇಕಾಗೈತಿ. ನಮ್ಮ ಅಣ್ಣ ಹೋಗ್ಯಾನ ಬಿಡಿಸಿಕೊಂಡು ಬರಾಕ ಏನೇನು ಮಾಡಿಕೊಂಡು ಬರತಾನ ಏನೊ ಆದರೂ ನನ್ನ ಜೀವ ತಡಿವಲ್ದು ಅತತ ಆ ಪೋಲೀಸ್ ಸ್ಟೇಷನ್‌ಗೆ ಹೋಗಿ ಬರತೀನಿ.

[ ಮೈ ನೋವನ್ನು ಮುಟ್ಟಿಕೊಳ್ಳುತ್ತ ಅಯ್ಯೋ ಅಮ್ಮಾ ಎಂದು ದಾನ ಬರುವನು. ದಾನನ ಮೈ ಮುಟ್ಟಿ ನೋಡಿ ] ಅಯ್ಯೋ ದಾನ ಬಾರಿ ಬಡದರೇನೊ.

**ದಾನ** – ಬಡದರಂತ ಕೇಳ್ತೀಯಲ್ಲ ಆ ಹಲ್ಕನನಮಕ್ಕಳು 3 ತಿಂಗಳು ಮ್ಯಾಕ ಏಳದಂಗ ಬಡದಾರ.

**ಕೆಂಪಿ** – ಅಯ್ಯಯ್ಯೋ ಮೈ ಅಂಬೋದು ಕೆಂಪಗ ಖರ್ಜೂರ ಹಣ್ಣ ಅದಂಗ ಆಗೈತಲ್ಲ ಇಷ್ಟು ಹೊಡಿಸಿಕೊಂಡು ಸುಮ್ಮನೆ ಇದ್ದೇನು ?

**ದಾನ** – ಮತ್ತೇನು ಮಾಡೋದಾ ಕೆಂಪಿ ಅವರ ಕೈಗೆ ಸಿಕ್ಕರ ಬಟ್ಟ್ರೇನು ಪದಿಯೋದು ಒಂಬತ್ತು ಹತ್ತು ಮಂದಿ ಇರತಾರ ಅವರ ಮನಸಿಗೆ ಎಂಗಂಗ ತಿಳಿತೈತಿ ಹಂಗಂಗ ನಾದತಾರ.

**ಕೆಂಪಿ** – ಬೇವರ್ಸಿಗಳು, ಟಿಕನಾಸಿಗಳು, ಹಲ್ಕ್ಯಾಗಳು ಅಪ್ಪಕ್ಕಂತು ಏಟೇಟು ಕರುಣೆ ಇಲ್ಲ ನೋಡು.

**ದಾನ** – ನಿಮ್ಮಣ್ಣಗ ನನ್ನ ಮೇಲೆ ಕರುಣೆ ಇಲ್ಲಾ ಅಂದ ಮೇಲೆ ಅವರಿಗೆ ಎಲ್ಲಿಂದ ಬರಬೇಕು. ನನ್ನ ಹೊಡಿಯುದ ನೋಡಕಂತ ಬೀಡಿ ಸೇದಿಕೊಂಡು ಕಾಲ ಮೇಲೆ ಕಾಲ ಹಾಕ್ಯೊಂಡು ಕುಂತಿದ್ದ ನಿಮ್ಮಣ್ಣ.

**ಕೆಂಪಿ** – ಮತ್ತೆ ನಮ್ಮಣ್ಣ ನಿನ್ನ ಬಿಡಿಸಿಕೊಂಡು ಬರತೀನಿ ಅಂತ ಬಂದಿದ್ದನಲ್ಲ.

**ದಾನ** – ಅವನು ನನ್ನ ಬಿಡಿಸಿಕೊಂಡು ಬರಾಕ ಬಂದಿದ್ದಿಲ್ಲ.

ಇನ್ನೊಂದು 6 ತಿಂಗಳು ಇವನ ಹೊರಗೆ ಬಿಡಬ್ಯಾಡ್ರಿ ಅಂತ ಹೇಳಾಕ ಬಂದಿದ್ದ ನೋಡು.

**ಕೆಂಪಿ** –. ಮತ್ತ ನೀ ಯಾಂಗ ಬಂದಿ.

**ದಾನ** – ಅವರಿಗೆ 5 ಸೀಲ್ ಬಾಟ್ಲಿ ಕೊಡಿಸಿ ಹೊರಗ ಬಂದಿನಿ ನೋಡು,

**ಕೆಂಪಿ** – ಸೀಲ್ ಬಾಟ್ಲಿ ಅಂದರೇನು?

**ದಾನ** – ಅದ........ ಸರಾಯಿ.

**ಕೆಂಪಿ** – ಅಂತವರು ಸರಾಯಿ ಕುಡಿತಾರೇನು?

**ದಾನ** – ಅವರು ಮ್ಯಾಲಿಂದ ಇಳಿಬಿದ್ದರೇನು? ಚಲೋ ಶ್ರೀಮಂತರು ಸಿಕ್ಕಾಗ ಬೀರು ಬ್ರಾಂದಿ ಕುಡಿತಾರ. ನಮ್ಮಂತವರು ಸಿಕ್ಕಾಗ ಸೀಲ್ ಬಾಟ್ಲಿ ಎತ್ತತಾರ,

**ಕೆಂಪಿ** – ಈಮಟ್ಟಕ್ಕ ಬಂದು ಬಿಟ್ಟಾರ ಅಗ್ಲೆ.

**ದಾನ** – ಅಯ್ಯೋ ಕೆಂಪಿ ಇನ್ನು ಕೆಲವು ದಿವಸ ತಡಿ ಸೇಂದಿ ಕೂಡ ಸಿಗಪಂಗ ಅಕರ. ಈಗ ಅವರದು ಒಂದು ನಮೂನಿ ನಡಿತೈತಿ ನಡಸಾಕ ಹತ್ಯಾರ. ಮುಂದೆ ಗಟಾರದ ನೀರು ಕುಡ ಸಿಗದಂಗ ಅಕಾರ.

**ಕೆಂಪಿ** – ಹೋಗಲಿ ಬಿಡು ಮಾರಾಯ ಆ ಬೇವರ್ಸಿಗಳ ಸುದ್ದಿ ನಮಗ್ಯಾಕ. ಬಾ. ಬಾ. ಮನಿಗೋಗಿ ಬಿಸಿ ಬಿಸಿ ಕೇಸರಿಬಾತ್ ಮಾಡಿ ಕೊಡತೀನಿ ತಿಂದು ಆಮ್ಯಾಗ ನಿಮ್ಮನಿಗೆ ಹೋಗುವಂತಿ ಬಾ. ಬಾ....

**ದಾನ** – ಏ ಕೆಂಪಿ ನನ್ನ ಮೇಲೆ ಎಷ್ಟೊಂದು ಪ್ರೀತಿ ಇಟ್ಟಿಯಲ್ಲೆ.

**ಕೆಂಪಿ** – ಏನ್ ಹಂಗ ಕೇಳತಿ. ಹೆಣ್ಣು ಒಮ್ಮೆ ಮನಸಿಡ್ತು ಅಂದ್ರೆ ಮುಗುದ ಹೋತು ಜೀವಕ್ಕ ಜೀವ ಕೊಡಕ ತಯಾರಿ ಇರತಾರ,

**ದಾನ** – ಎಲ್ಲರು ನಿನ್ನಂಗ ಇರಬೇಕಲ್ಲ ಕೆಲವರು ಜೀವ ಕೊಡಾಕ ತಯಾರ ಇರತಾರ ಕೆಲವರು ಜೀವ ತಗಿಯಾಕ ಇರತಾರ.

ಕೆಂಪಿ – ನೀನು ಹೇಳುವ ಮಾತು ನಿಜ ಐತಿ ನೋಡು, ನೀನು ಅಂದಂಗ ಊರಾಗ ಆ ಡಾಕ್ಟರ್ ರವಿಚಂದ್ರಪ್ಪನ ಹೆಂಡತಿ ಕಥಿ ಬಹಳ ಜೋರಾಗಿ ನಡದೈತಿ ಊರಾಗೆಲ್ಲ ಗುಸು ಗುಸು ಅಂತ ಅತಿ ಸುದ್ದಿನಾ.

ದಾಸ – ಏ ಕೆಂಪಿ ಆ ಸುದ್ದಿ ನಮಗ್ಯಾಕ ನನಗ ಹೇಳಿದಂಗ ಮತ್ಯಾರಿಗೂ ಹೇಳಬೇಡ. ಈಗಿನ ಕಾಲ ಬಹಳ ಸೂಕ್ಷ್ಮ ಐತಿ. ಮಾಡಿದವರನ್ನ ಬಿಟ್ಟು ಅಂಕಿ ನೋಡಿದವರನ್ನ ತಗೊಂಡು ಹೋದಂಗ ಮತ್ತ ನಿನಗೂ ಬಂದೀತು ಆ ಪಾಳಿ ನಡಿ ನಡಿ ಮನಿಗೆ ಹೋಗೋಣ.

ಕೆಂಪಿ – ಹೌದು ಬಾ ಮಾರಾಯಾ ನಿಂದು ನನಿಸಿಕೊಂಡರೆ ಯಾರ ಸುದ್ದಿನೂ ಮಾತನಾಡದಂಗ ಹಾಗೈತಿ ನಮಗ್ಯಾಕ ಬೇಕು ನಮ್ಮ ಸುದ್ದಿನ ಇನ್ನು ಬಹಳ ಐತಿ. [ ಇಬ್ಬರು ಹೋಗುವರು ]

[ ಇನ್ನೊಂದು ಕಡೆಯಿಂದ ಧರ್ಮಣ್ಣ ಆನಂದದಿಂದ ಬೀಡಿ ಸೇದುತ್ತಾ ಬರುವನು ]

ಧರ್ಮಣ್ಣ – ಅಬ್ಬಾ! ಎಂಥ ಬಿತ್ರಪಾ ಅವ ದಾಸ, ದನ ಇದ್ದಂಗ ಅದಾನ ಅಂದರ್ಲೆ ತಡಕೊಂಡ. ಅದೇ ಬಿತ್ತ ನನಗೇನಾದರೂ ಬಿದ್ದಿದ್ದರೆ ಸ್ಟೇಷನ್ನಿಂದ ಹೊರಗೆ ಬರ್ತ್ವಾನೆ ಇರಲಿಲ್ಲ. ನನ್ನ ಸಮಾದಿ ಅಲ್ಲೇ ಆಗುತಿತ್ತು. ಅವನ್ನ ಇನ್ನು ಆರು ತಿಂಗಳು ಹೊರಗೆ ಬಿಡಬೇಡಿರಿ ಅಂತ ಆ ಸಾಹೇಬರಿಗೆ ಗಟ್ಟಿಯಾಗಿ ಹೇಳಿ ಬಂದಿನಿ. ನಾನೆಲ್ಲ ಬಿಡಿಸಿಕೊಂಡು ಬರಬೇಕಂತ ಮಾಡಿದ್ದೆ. ನಾ ಮಾಡಿದ ಬಂಡ ಬಾಳೇವೃಕ್ಷ ಆ ದಾಸನ ಹಿಡಿಸಿ ಹೊಡಿಸಿದೆ. ಈಗ ನಾನೇನಾದರೂ ಬಿಡಿಸಿಕೊಂಡು ಬಂದಿದ್ದರೆ ನನ್ನ ಹಿಗ್ಗಾ ಮುಗ್ಗಾ ಬಡುದುಬಿಡುತಿದ್ದ ಆ ದಾಸ, ಇರಲಿ ಇರಲಿ ಇನ್ನೊಂದು ಆರು ತಿಂಗಳು ಅಲ್ಲೇ ಇರಲಿ ಯಾಕೆಂದರೆ ಅವರ ಬಡತಕ್ಕೊ. ಅವರು ಹಾಕುವ ಕೂಳಿಗೂ, ಆ ಕೋಲ್ಯಾಗ ಕಡಿಯೊ ಸೊಳ್ಳಿ ಕಡಿತಕ್ಕೊ. ಮಗ ಪಿಡಲ ಕಟಿಗಿ ಆದಂಗ ಆಕಾನ. ಆಮೇಲೆ ಇವನ್ನ ಬಿಡಿಸಿಕೊಂಡು ಬಂದರಾಯ್ತು. ಈ ದಾಸನ್ನ ಗದ್ಲದಾಗ ಸಿಕ್ಕು ಎರಡು ವಾರ ಆಯಿತು. ಸಂತ್ಯಾಗ ಹೋಗಿಲ್ಲ ಈಗ ಸಂತ್ಯಾಗ ಹೊಕ್ಕೈನಿ, ಅಲ್ಲಿ ಯಾವನಾದರು

ಒಬ್ಬನು ಏನ್ಮ್ರ, ಆಕಳು ಕೊಳ್ಳಲು ಬಂದಿರ್ತಾನ. ಕೈ ಮುಚ್ಚಿ ಹೊಡದು ನೂರು. ಇನ್ನೂರು ಉಳಿಸಿಕೊಂಡು ಸೂಳಿ ಸುಂಕಿ ಮನಿಗೆ ಹೋಗಿ ಸುಖ ಕಂಡು ಬರತೀನಿ. ಆವತ್ತೇನೋ ತಪ್ಪಿಸಿಕೊಂಡು ಬಂದೀನಿ. ಇವತ್ತು ನಾನ್ಯಾಕ ಅಂಗ ಬರಲಿ ಬೇಕ್ಕಾದ್ದಾಗಲಿ ನಾನಿವತ್ತು ಸುಖದಾಗ ಬೀಳೋನ, [ ಹೋಗುವಾಗ ಎದುರಿಗೆ ಸೂರ್ಯಚಂದ್ರ ಅರ್ಚನ ಎದುರಿಗೆ ಬರುವರು ]

**ಸೂರ್ಯಚಂದ್ರ** – ಏನ್ ದಲಾಲಿ ಧರ್ಮಣ್ಣನವರೇ

**ಧರ್ಮಣ್ಣ** – ನಮಸ್ಕಾರ್ರೀ

**ಸೂರ್ಯಚಂದ್ರ** – ಯಾಕರಿ ಇಂದು ಸಂತ್ಯಾಕ ಹೋಗಿಲ್ಲವಲ್ಲ

**ಧರ್ಮಣ್ಣ** – ಈಗ ಅಲ್ಲಿಗೆ ಹೊಂಟೀನ್ರಿ.

**ಅರ್ಚನ** – ಏನು ಧರ್ಮಣ್ಣನವರೇ ಈಕಡೆಯಿಂದ ಬಂದಿರಲ್ಲ ಎಲ್ಲಿಗೆ ಹೋಗಿದ್ರಿ.

**ಧರ್ಮಣ್ಣ** – ಎಲ್ಲಿಗೆ ಪೋಗಲಮ್ಮ, ಊರಿಗೆ ಹೆಚ್ಚಾದವನು ಆ ದಾನಸ ಬಿಡಿಸಿಕೊಂಡು ಬರಾಕ ಅಂತ ಹೋಗಿದ್ದೆ.

**ಸೂರ್ಯಚಂದ್ರ** – ಏಕೆ ಅವನನ್ನ ಬಿಟ್ಟಿಲ್ಲವೆ.

**ಧರ್ಮಣ್ಣ** – ಅವರು ಹಂಗ ಎಲ್ಲಿ ಬಿಡ್ತಾರ್ರಿ ಅವರಿಗೆ ಕೊಡೋದು ಕೊಟ್ರೆ ಬಿಡ್ತಾರ್ರಿ. ಅದ್ರಾಗ ಆ ದಾನ ಕೊಡೋನಲ್ಲ ಬಿಡೋನಲ್ಲ ಏಳು ಜಿಪುಣನನಮಗ.

**ಅರ್ಚನ** – ಅವನು ಹಾಗೆ ಮಾಡಬಾರದಾಗಿತ್ತು ಏನೋ ತಿಳುವಳಿಕಿ ಇಲ್ಲದೆ ಮಾಡಿದ್ದಾನೆ, ಏನ್ರಿ ನೀವಾದರೂ ಹೋಗಿ ಬಿಡಿಸಿಕೊಂಡು ಬನ್ರೀ.

**ಸೂರ್ಯಚಂದ್ರ** – ಆಗಲಿ ಅರ್ಚನ ಬಿಡಿಸಿಕೊಂಡು ಬರ್ತೀನಿ.

**ಧರ್ಮಣ್ಣ** – ಛೇ! ಛೇ! ಛೇ! ಬ್ಯಾಡ್ರಿಯಪ್ಪಾ ಅದು, ಅವನು ಇನ್ನೋನು ದಿವಸ ಅವನು ಅಲ್ಲೆ ಇರಲಿ.

**ಅರ್ಚನ** – ಯಾಕೆ ಧರ್ಮಣ್ಣನವರೇ ಅವನನ್ನ ಬಿಡಿಸಿಕೊಂಡು ಬಂದರೆ ನಿಮಗೇನು ತೊಂದರೆ ಆಗುತ್ತೆ.

**ಧರ್ಮಣ್ಣ** – ತೊಂದರೆ ಏನೂ ಆಗೋದಿಲ್ಲರೀ ನನ ಮೈ ಮುಗ್ಗಲು ಆಕೈತಿ.

**ಸೂರ್ಯಚಂದ್ರ** – ಯಾಕೆ ?

**ಧರ್ಮಣ್ಣ** – ಯಾಕಂತ ಕೇಳತಿರಲ್ರಿ. ಆ ಕಥಿ ದಾಳೈತಿ ಇಲ್ಲೆ ರೋಡಿನಾಗ ಹೇಳೋದಲ್ಲ ಮನ್ಯಾಗ ಹೇಳುತೀನಿ ಬರ್ರಿ.

**ಸೂರ್ಯಚಂದ್ರ** – ಹಾಗಾದರೆ ನೀನು ಮನೆಗೆ ನಡಿ. ನಾವು ಮಾರ್ನಿಂಗ್ ಷೊ "ಒಂದು ಮುತ್ತಿನ ಕಥೆ" ಇದೆಯಂತೆ ನೋಡಿಕೊಂಡು ಬರುತ್ತೀವಿ.

**ಧರ್ಮಣ್ಣ** – ಹಂಗ ಮಾಡ್ರಿ, ನೀವು ಸ್ಟೇಷನ್ ಕಡೆ ಹೋದಿರೀ ಅವನ ಬಿಡಿಸಿಕೊಂಡು ಬರಕಾ.

**ಸೂರ್ಯಚಂದ್ರ** – ಇಲ್ಲ ಹೋಗು ಧರ್ಮಣ್ಣ.

**ಧರ್ಮಣ್ಣ** – ನಾನು ಬರ್ತಿನ್ರಿ. [ಧರ್ಮಣ್ಣ ಹೋಗುವನು]

**ಸೂರ್ಯಚಂದ್ರ** – ಅರ್ಚನಾ ನನ್ನ ಮಿತ್ರ ವಿಶ್ವಚಂದ್ರನು ಪಿಕ್ಚರಿಗೆ ಬರತೀನಿ ಎಂದು ಹೇಳಿದ್ದ ಇನ್ನೂ ಬರಲಿಲ್ಲ.

**ಅರ್ಚನ** – ನೀವಂತೂ ಸ್ನೇಹಿತರನ್ನು ಬಿಟ್ಟು ಎಲ್ಲಿಗೂ ಹೋಗುವುದಿಲ್ಲ ನೋಡಿ. ನೀವು ಹಾಗೆ ಇದೀರಿ, ನಿಮ್ಮ ಸ್ನೇಹಿತರೂ ಹಾಗೆ ಇವಾರೆ.

**ಸೂರ್ಯಚಂದ್ರ** – ಏಕೆ ಏನಾಯಿತು. ಜೀವನದಲ್ಲಿ ಜನ ಸಂಪರ್ಕ ಇರಬೇಕು. ಸ್ನೇಹಿತರನ್ನು ಗಳಿಸಬೇಕು ಅಂದ್ರನೇ ಮನಸ್ಸಿಗೆ ನೆಮ್ಮದಿ ಇರುತ್ತದೆ.

**ಅರ್ಚನ** – ನಿಮ್ಮ ಸ್ನೇಹ ಕಟ್ಟಿದವರೆಲ್ಲಾ ನಿಮ್ಮಂತೆ ಇರಬೇಕಲ್ಲ ನೀವು ಬೆಳ್ಳಗಿದ್ದದ್ದೆಲ್ಲಾ ಹಾಲು ಎಂದು ನಂಬುತ್ತೀರಿ. ನಿಮ್ಮ ಸ್ನೇಹಿತರು ಹಾಲಿನಲ್ಲಿ ಉಳಿ ಬೆರಸುವವರು ಎಷ್ಟೋ ಜನರಿದ್ದಾರೆ.

**ಸೂರ್ಯಚಂದ್ರ** – ನೋಡು ಅರ್ಚನಾ ನೀನು ಅಂದಂತೆ ಕೆಲವರು

ಇರಬಹುದು. ಆದರೆ ನಮ್ಮ ವಿಶ್ವಚಂದ್ರನು ಅಂಥವನಲ್ಲ ಒಳ್ಳೆಯ ವ್ಯಕ್ತಿ ಅವನ ಹೃದಯ ಹಾಲಿನಂಥಹದು.

**ಅರ್ಚನ** – ಇರಬೇಕು. ಇರಬೇಕು. ಅಂತಿಯೇ ಅಷ್ಟೊಂದು ಪ್ರೀತಿ ಇಟ್ಟಿರುವಿರಿ. ನಿಮಗೆ ಈಗ ಗೊತ್ತಾಗುವುದಿಲ್ಲ. ಇನ್ನು ಕೆಲವೇ ದಿವಸ ಕಳೆದ ಮೇಲೆ ವಿಶ್ವಚಂದ್ರ ಯಾರು ? ರವಿಚಂದ್ರ ಯಾರು ? ನೀವು ಯಾರು? ಎಂಬುದು ಚೆನ್ನಾಗಿ ತಿಳಿಯುವುದು. ಇರಲಿ ನಡೆಯಿರಿ ಈಗ ನಾವು ಹೊರಟಿರುವುದು ಪಿಕ್ಚರಿಗೆ,

**ಸೂರ್ಯಚಂದ್ರ** – ತಡೆದು ಕೊಳ್ಳೆ [ ಕೆನ್ನೆ ತಟ್ಟುವನು ಅರ್ಚನಾ ನಗುವಳು ]

**ಅರ್ಚನ** – ಅಲ್ರಿ ಮುತ್ತಿನ ಕಥೆ ಸಿನಿಮಾ ನೋಡೋದಕ್ಕೆ ಹೊರ-ಟಿರುವಿರಿ ಇಲ್ಲಿಯೇ ಮುತ್ತು ನೀಡಲು ಹೊರಟಿರುವಿರಲ್ಲ.

**ಸೂರ್ಯಚಂದ್ರ** – ಯಾರಿಗೆ ಬೇಕಾಗಿದೆ ಮುತ್ತಿನ ಕಥೆ ನೀನು ನನ್ನ ಬಳಿಯಲ್ಲಿದ್ದು ಒಂದು ಮುತ್ತು ಕೊಟ್ಟರೆ ಸಾಕು.

**ಅರ್ಚನ** – ಥೂ ಹೋಗೀಪ್ಪಾ ನಾಚಿಕೆಯಾಗುತ್ತೆ.

**ಸೂರ್ಯಚಂದ್ರ** – ಹೆಣ್ಣಿಗೆ ನಾಚಿಕಿ ಇದ್ರೇನೆ ಗಂಡಿಗೆ ಹೊಸ ಚೇತನ ಬರುವುದು. ಹೆಣ್ಣು ಮೌನ ತಾಳಿದರೆ ಗಂಡು ನಿಶ್ಯಕ್ತನಾಗುತ್ತಾನೆ.

**ಅರ್ಚನ** – ನೀವಂತು ಮಹಾ ರಸಿಕರು ಮನೆಯಲ್ಲಿ ಮುದ್ದಾಡು-ವುದನ್ನು ಬಿಟ್ಟು ರಸ್ತೆಯಲ್ಲಿ ಶುರು ಆಗಿದೆ ನಿಮ್ಮ ರಸಿಕತೆ.

**ಸೂರ್ಯಚಂದ್ರ** – ಬಾರೆ ಬಳಿಗೆ ಈಗ ನೀನು ಇರುವುದನ್ನು ನೋಡಿದರೆ ನನಗೇನು ಬೇಡವೆನಿಸುತ್ತದೆ ಹೂಂ॥ ಬಾರೆ.

**ಅರ್ಚನ** – ಹೂಂ॥ ಹೂಂ ॥ ಬರೋದಿಲ್ಲ.

**ಸೂರ್ಯಚಂದ್ರ** – ನಾನು ಬಿಡುವುದಿಲ್ಲ.

— ಜೋಡಿ ಹಾಡು —

ಜೋಡಿ - ಪ್ರೀತಿ ಸೇರಿದಾಗ | ಹಾಲು ಜೇನು |
ಪ್ರೇಮದ ಕಾಣಿಕೆ ನೀತಿಯ ಕಾಣಿಕೆ |
|| ಪ್ರೀತಿ ||

ಗಂಡು - ಮನ ಮೆಚ್ಚಿದಾ ಮಡದಿ |
ಹೆಣ್ಣು - ರಾಜಾ ನನ್ನ ರಾಜ ಪ್ರೀತಿ ಜನ-ನಾಯಕ
ಗಂಡು - ಮನಗೆದ್ದ ಮಡದಿ | ಅವಳೆ ನನ್ನ ಹೆಂಡತಿ
ಮನಸಾಕ್ಷಿ ನಾ ನಿನ್ನ ಬಿಡಲಾರೆ ||
|| ಪ್ರೀತಿ ||

ಹೆಣ್ಣು - ಚಿನ್ನ ನಿನ್ನ ಮುದ್ದಾಡುವೆ.......
ಗಂಡು - ಬಾಳು ಬೆಳಗಿತು ಜೀವನ ಜ್ಯೋತಿ
ಹೆಣ್ಣು - ಅನುರಾಗ ಅರಳಿತು ಹೃದಯ ಪಲ್ಲವಿ
ಹೊಸಬೆಳಕು ನೀನನ್ನ ದೈವಾ........
|| ಪ್ರೀತಿ ||

## ಪ್ರವೇಶ ೮ [ಜಂಗಲ್]

[ಪ್ರತಾಪ್‌ಸಿಂಗ್, ಧರೋಡೆಸಿಂಗ್ ಚಂದ್ರ-ಸುಧಾ ರನ್ನು ಹೊತ್ತು ತರುವರು. ಪ್ರತಾಪ್‌ಸಿಂಗ್‌ನ ಕೈಯ್ಯಲ್ಲಿ ಮಚ್ಚು ಇರುವುದು, ಮಕ್ಕಳು ಅಳುತ್ತಾ ಇರುವರು]

**ಪ್ರತಾಪ್‌ಸಿಂಗ್** - ಏ ಬಾಯಿ ಮುಚ್ಚುರಿ ನಮ್ಮ ಹತ್ರ ಅತ್ರೆ ಬಿಡತೀವೇನು ನಿಮ್ಮನ್ನ.

**ಧರೋಡೆಸಿಂಗ್** - ಅತ್ತು ಹೆದರಿಸಿದರೆ ಸುಮ್ಮನೆ ಬಿಡತಾರೆ ಅಂತ

ತಿಳಿದಿರೇನು ? ನಮ್ಮ ಹತ್ರ ಇವೆಲ್ಲ ನಡಿಯೋದಿಲ್ಲ. ನಮ್ಮ ಕೈಯಾಗ ಸಿಕ್ಕಾಗ ಕೊಲೆ ಮಾಡುವುದೇ ನಮ್ಮ ಕೆಲಸ.

**ಉಮಾಚಂದ್ರ, ಸುಧಾ** – ನಿಮ್ಮ ಕಾಲಿಗೆ ಬೀಳತೀವಿರಪ್ಪ. ನಿಮ್ಮ ಮಕ್ಕಳಂತೆ ತಿಳಿದು ನಮ್ಮನ್ನು ಬಿಟ್ಟು ಬಿಡಿರಿ, ನಾವು ಇಲ್ಲೆಲ್ಲಿ ಇರುವುದಿಲ್ಲ ಎಲ್ಲಾದರೂ ದೂರ ಹೋಗಿ ಬಿಕ್ಷೆ ಬೇಡಿಕೊಂಡು ಜೀವನ ಮಾಡತೀವಿ. ನಮ್ಮನ್ನ ಬಿಟ್ಟು ಬಿಡಿರಪ್ಪಾ.

**ಥರೋಡೆಸಿಂಗ್** – ನೀವು ಏನು ಹೇಳಿದರು ನಾವು ಬಿಡಬೇಕಲ್ಲ. ನಾವು ನಿಮ್ಮನ್ನ ಹಂಗ ಬಿಟ್ರ ನಮಗೆ ದುಡ್ಡು ಕೊಟ್ಟವರು ನಮ್ಮನ್ನ ಹಂಗ ಬಿಡತಾರೇನು ? ನಮ್ಮ ಕಥೆ ಮುಗುಸ್ತಾರ.

**ಉಮಾಚಂದ್ರ** – ದಮ್ಮಯ್ಯ ಅಂತೀವಿ. ನಮ್ಮ ತಂದೆಯವರು ಮೈಸೂರಿಗೆ ಹೋಗ್ಯಾರ. ನಮ್ಮನ್ನ ಅಲ್ಲಿಗಾದರೂ ಕರೆದುಕೊಂಡು ಹೋಗ್ರಿ ನಿಮಗೆ ಎಷ್ಟು ಬೇಕೋ ಅಷ್ಟು ದುಡ್ಡು ಕೊಡುಸುತ್ತೇವೆ. ನಮ್ಮನ್ನ ಮಾತ್ರ ಕೊಲ್ಲಬೇಡಿ,

**ಥರೋಡೆಸಿಂಗ್** – ಪ್ರತಾಪ್‌ಸಿಂಗ್ [ಇಬ್ಬರೂ ನಗುವರು]

**ಪ್ರತಾಪ್‌ಸಿಂಗ್** – ದುಡ್ಡು ಕೊಡಿಸುತ್ತಾರಂತೆ ದುಡ್ಡು.

[ ಮತ್ತೆ ಇಬ್ಬರು ನಗುವರು ]

**ಥರೋಡೆಸಿಂಗ್** – ಏ ಪ್ರತಾಪ್‌ಸಿಂಗ್ ಇವರ ಮಾತು ಏನು ಕೇಳತಿಯೋ ಜಲ್ದಿ ಇವನ್ನ ಮುಗಿಸಿ ಮುಂದೆ ಹೋಗೋನು, ಇಂತಹ ಕೆಲಸಗಳು ಇನ್ನು ಬಹಳ ಇವೆ.

**ಪ್ರತಾಪ್‌ಸಿಂಗ್** – ಹೌದು ನಡಿಯೋ ಥರೋಡಿ, ನೀನು ಸುಧಾನ ಹಿಡಿದುಕೋ ಮೊದಲು ಇವನನ್ನು ಕಡಿತೀನಿ, ಏ ಉದ್ದಕ ಮಲಗಿಕೋ [ಉಮಾಚಂದ್ರನನ್ನು ಅಡ್ಡ ಕೆಡವುವನು. ಉಮಾಚಂದ್ರ ಅಪ್ಪಾ ಅಮ್ಮಾ

ಎಂದು ಚೀರುವನು] ಹೇ ಸುಮ್ಮನೆ ಬೀಳು. [ಮುಚ್ಚು ಮೇಲೆ ಎತ್ತುವನು]

**ಧರೋಡೆಸಿಂಗ್** – ಹೇ ನಿಲ್ಲಿಸೋ ಮರತಿಯೇನು?

**ಪ್ರತಾಪಸಿಂಗ್** – ಏನೋ?

**ಧರೋಡಿಸಿಂಗ್** – ನಾವು ಯಾರನ್ನು ಕೊಲೆ ಮಾಡಬೇಕಾದರೂ ಅವರಿಗೆ ಹೊಟ್ಟೆ ತುಂಬಾ ತಿನಿಸಿ ಕೊಲ್ಲುತ್ತೀವಿ, ಇವರನ್ನ ಹಾಗೆ ಕೊಲ್ಲುತ್ತಿಯೇನೋ?

**ಪ್ರತಾಪ್‌ಸಿಂಗ್** – ಹೌದು! ಏ ಏನು ತಿನ್ನುವ ಆಸೆ ಇದೆ ನಿಮಗೆ ಹೇಳ್ರಿ, ನಿಮಗೆ ತಿನಿಸಿ ಕೊಲ್ಲುತ್ತೀವಿ.

**ಉಮಾಚಂದ್ರ** – ನಮಗೇನು ಬೇಡ್ರಪ್ಪ ನಮ್ಮನ್ನು ಜೀವದಿಂದ ಉಳಿಸಿದರೆ ಸಾಕು.

**ಧರೋಡೆಸಿಂಗ್** – ನಿಮ್ಮನ್ನು ಉಳಿಸಬೇಕಾ?

**ಪ್ರತಾಪ್‌ಸಿಂಗ್** – ಏ ಸಿಂಗ್ ಅವರನ್ನೇನು ಕೇಳುವಿಯೋ ಮೊದಲು ಇವರನ್ನ ಹೆಗಲಿಗೆ ಹಾಕ್ಕೊ ಅಲ್ಲಿ ಹೋಳಿದಂಡೆಯಲ್ಲಿ ಇವರಿಗೆ ಹೊಟ್ಟೆ ತುಂಬಾ ತಿನಿಸಿ ತುಂಡು ತುಂಡಾಗಿ ಕಡಿದು ಚೀಲದಲ್ಲಿತುಂಬಿ ಅಲ್ಲಿಯೇ ಹುಗಿದು ಬಿಡೋಣ. ನಾಲ್ಕು ದಿವಸಕ್ಕೆ ಆ ನೀರಿನ ದಾಹಕ್ಕೆ ಎಲ್ಲಾ ಕೊಳೆತು ಹೋಗುತ್ತದೆ.

**ಧರೋಡೆಸಿಂಗ್** – ಹೌದು ಬಾರೋ ನೀನು ಅನ್ನುವದೆ ಕರೆಕ್ಟ್ ಇದೆ [ಚಂದ್ರ-ಸುಧಾರನ್ನು ಹೆಗಲಿಗೆ ಹಾಕುವರು ಇಬ್ಬರು ಮಕ್ಕಳು ದುಃಖಿಸುತ್ತ]

**ಇಬ್ಬರು** – ಬ್ಯಾಡ್ರಪಾ ನಮ್ಮನ್ನ ಕೊಲೆ ಮಾಡಬ್ಯಾಡರಿ.

**ಪ್ರತಾಪ್‌ಸಿಂಗ್** – ಧರೋಡಿ ಏ ಧರೋಡಿ ಎಷ್ಟು ಹೇಳಿದರು ಇವರು ಸುಮ್ಮನೆ ಇರುವಲ್ಲರು ಬಾಯಿಗೆ ಬಟ್ಟೆ ತುರುಕು. ಇವರು ಚೀರುವುದು ಕೇಳಿದರೆ ಮತ್ತೆ ಯಾರಾದರೂ ಬಂದಾರು.

[ಧರೋಡಿ ಬಾಯಿಗೆ ಬಟ್ಟೆ ತುರುಕುವನು]

**ಧರೋಡೆಸಿಂಗ್** – ನಡೆ ಹೋಗುವಾ [ಇಬ್ಬರು ಹೋಗುವರು]
[ಅದೇ ಜಂಗಲ್ ಇನ್ನೊಂದು ಕಡೆಯಿಂದ ಕಾಂಚನ ಮತ್ತು ವಿಶ್ವಚಂದ್ರ ಒಳ್ಳೆಯ ಡ್ರಸ್ ಮಾಡಿಕೊಂಡು ಜಾಲಿಯಾಗಿ ಬರುವರು ]

**ಕಾಂಚನ** – ವಿಶ್ವ ರವಿಯು ಬರುವ ದಿನಗಳು ಸಮೀಪಿಸಿದವು. ಮಕ್ಕಳೆಂದರೆ ಅವರಿಗೆ ಇಲ್ಲದ ಪ್ರೀತಿ. ಅವರಿಗೆ ಏನು ಹೇಳಬೇಕೆಂಬುದೆ ನನಗೆ ತಿಳಿಯದಾಗಿದೆ,

**ವಿಶ್ವಚಂದ್ರ** – ಇಷ್ಟೇಕೆ ಅಧೈರ್ಯ ತಾಳುವಿ ನಿನ್ನ ಬಳಿಯಲ್ಲಿ ಈ ವಿಶ್ವ ಇರುವ ತನಕ,

**ಕಾಂಚನ** – ನಾನು ಅಧೈರ್ಯ ತಾಳಿದ್ದರೆ ಮಕ್ಕಳನ್ನು ಕೊಲ್ಲಿಸಲು ನಿಮ್ಮನ್ನು ಬಿಡುತ್ತಿರಲಿಲ್ಲ. ಅದರೂ ರವಿಯು ಬಂದರೆ ಅವನು ಜೀವ ದಿಂದ ಉಳಿಯುವನು ಎಂಬ ನಂಬಿಕೆ ನನಗಿಲ್ಲ.

**ವಿಶ್ವಚಂದ್ರ** – ಅವನ ಮೇಲೆ ಎಷ್ಟೊಂದು ಮಮತೆ ಇಟ್ಟಿರುವೆ-ಯಲ್ಲೆ, ನಾನು ನಿನ್ನ ಬಳಿಯಲ್ಲಿ ದಾಸನಾಗಿರುವಾಗ ಅವನಿಗಾಗಿ ನೀನೇಕೆ ಚಿಂತಿಸುವೆ.

**ಕಾಂಚನ** – [ನಗುತ್ತಾ] ವಿಶ್ವ! ಕಾಮದ ಬಿಸಿಯು ಹೊಡತಕ್ಕೆ ತಡೆಯಲಾರದೆ 9 ತಿಂಗಳು ಹೊತ್ತು ಹೆತ್ತು ಮಮತೆಯಿಂದ ಬೆಳೆಸಿರುವ ಮಕ್ಕಳನ್ನೆ ಬಲಿ ಕೊಟ್ಟಿರುವಾಗ ಇನ್ನು ಹಸಿರು ತೋರಣದಲ್ಲಿ ಗಂಡನಾಗಿ ತಾಳಿ ಕಟ್ಟಿದವನಿಗಾಗಿ ನಾನೇಕೆ ಚಿಂತಿಸಲಿ.

**ವಿಶ್ವಚಂದ್ರ** – ಕಾಂಚನ! ಮಮತೆಯ ಮಕ್ಕಳನ್ನು ಬಲಿಕೊಟ್ಟಿ-ರುವವಳು ನೀನೊಬ್ಬಳೆಯೆಂದು ತಿಳಿದುಕೊಂಡಿರುವೆಯಾ ಈ ಜಗತ್ತಿನಲ್ಲಿ ಹಿಂದೆ ಇಂತಹ ಘಟನೆಗಳು ಎಷ್ಟೋ ನಡೆದು ಹೋಗಿವೆ. ಮತ್ತು ಈಗಲೂ ನಡೆಯುತ್ತಲಿವೆ. ಅಂತಿಯೇ ನಮ್ಮಂತ ತರುಣರ ಪ್ರೇಮದಾಟ ಯಾವ ಅಡೆತಡೆ ಇಲ್ಲದೆ ನಡೆಯುತ್ತಿದೆ. ನೀನು ಮಾತ್ರ ನನ್ನನ್ನು ದೂರ ಮಾಡಲು ಪ್ರಯತ್ನಿಸಬೇಡ. ಅನು ಏನೇ ಬಂದರು ನಾನು ಮಾತ್ರ

ನಿನ್ನ ಕೈಬಿಡಲಾರೆ.

**ಕಾಂಚನ** – ಬಿಡುವ ಮಾತು ಎಲ್ಲಿಂದ ಬಂತು ನಿನಗಾಗಿ ಮಾತು ಕೊಟ್ಟಿರುವೆ, ಮೈ ಒಪ್ಪಿಸಿರುವೆ, ಮಕ್ಕಳನ್ನು ಕಳೆದುಕೊಂಡಿರುವೆ. ಆದರೆ ರವಿಯ ಎದುರಿನಲ್ಲಿ ಯಾವ ನಾಟಕವನ್ನು ಆಡುವಿ.

**ವಿಶ್ವಚಂದ್ರ** – ಅಯ್ಯೋ ಹುಚ್ಚಿ ಈ ವಿಶ್ವಚಂದ್ರನ ಕಪಟ ನಾಟಕಗಳಿಗೇನು ಕೊರತೆ? ರವಿಯು ಬಂದ ತಕ್ಷಣ ನೀನು ದುಃಖಿಸಿದಂತೆ ನಟನೆ ಮಾಡು, ನಾನೂ ನಿನ್ನಂತೆ ನಟನೆ ಮಾಡುತ್ತೇನೆ. ಶಾಲೆಗೆ ಹೋದ ಮಕ್ಕಳು ಮರಳಿ ಮನೆಗೆ ಬರಲೇ ಇಲ್ಲ ಎಂದು ಅಳುವುದು ಕರೆಯುವುದನ್ನು ಮಾಡು ಮುಂದಿನ ವಿಚಾರ ನನಗಿರಲಿ.

**ಕಾಂಚನ** – ಉಪಾಯಗಳನ್ನು ಹುಡುಕುವುದರಲ್ಲಿ ನೀವು ಮಹಾ ಬುದ್ಧಿವಂತರು.

**ವಿಶ್ವಚಂದ್ರ** – ಕಾಂಚನ ಈ ಬೀಸುವ ತಂಪಾದ ಗಾಳಿ, ನೀನು ಈಗ ಮಾಡಿಕೊಂಡಿರುವ ಶೃಂಗಾರ ಈ ಸುತ್ತು ಮುತ್ತಲು ಯಾರು ಇಲ್ಲದ ನಂದನವನ. ನನ್ನ ಮನವೇಕೋ ಒಂದಡಿ ಮುಂದಿಡದಾಗಿದೆ ಈ ಕ್ಷಣ.

**ಕಾಂಚನ** – ಈ ನಿಮ್ಮ ಮನ ಬೇರಾವ ಕುಸುಮಕ್ಕೆ ಆಶಿಸಬಾರದೆಂದೆ ಈ ಔತಣ.

**ವಿಶ್ವಚಂದ್ರ** – ನಮ್ಮಿಬ್ಬರಲ್ಲಿ ನವ ರಸವು ತುಂಬಿ ತುಳುಕುವಾಗ ಬೇರೊಂದು ಕುಸುಮಕ್ಕೆ ಆಶಿಸುವುದೇ ಈ ಮನ. ಈ ದುಂಬಿಯ ಮನ ತಣಿಸುವದೇ [ಕೆನ್ನೆ ತಟ್ಟಿ] ಕುಸುಮದ ಔತಣ,

— ಜೋಡಿ ಹಾಡು —

ಗಂಡು – ಊರ್ವಶಿ........ ಪ್ರೇಯಸಿ ।
ವೀಣೆ ನೀನುಡಿಸುಬಾ........
ಎನ್ನ ಮನದ ಹೃದಯತಂತಿಯ ನೀನುಡಿಸುಬಾ....

ಹೆಣ್ಣು - ಚುಂಬನ....... ರೋಮಾಂಚನ ]
ಮಧುರ ಈ ಸ್ಪಂಧನಾ........
ಎನ್ನ ಮನದ ಹೃದಯಗೀತೆಯು ನೀನೇ ಹಾಡು ಬಾ....
ಗಂಡು - ನನ್ನ ನಿನ್ನ ಪ್ರೇಮದ ಮಿಲನಾ....
ಸಂತೋಷದ ಈ ಮಿಲನ....
ಹೆಣ್ಣು - ಸಂಜೆಯು ಸೊಬಗಿನ ತಾಣ....
ತಂದಿದೆ ಹೊಸ ಹೊಸ ಚೇತನಾ....
ಗಂಡು - ಓಲಾಡುವಾ.... ನಾವು....
ಮನತುಂಬಿ ಆಡುವಾ....
ಹೆಣ್ಣು - ತೇಲಾಡುವಾ.... ನಾವು
ಮೈಮರೆತು ಹಾಡುವಾ....

**ವಿಶ್ವಚಂದ್ರ** - [ಹಾಡು ಮುಗಿದ ನಂತರ] ಕಾಂಚನ ಪ್ರತಾಪಸಿಂಗ್ ಧರೋಡೆಸಿಂಗ್ ಇನ್ನು ಬರಲಿಲ್ಲವಲ್ಲ.

**ಕಾಂಚನ** - ಇಲ್ಲಿಗೆ ಬರಲು ಹೇಳಿದ್ದಿರೇನು ?

**ವಿಶ್ವಚಂದ್ರ** - ಹೌದು ಅವರನ್ನು ಮುಗಿಸಿ ಇಲ್ಲಿಗೆ ಬರಲು ನಾನೇ ಹೇಳಿದ್ದೆ. ಏಕೆಂದರೆ ಅವರಿಗೆ ಇನ್ನಷ್ಟು ಹಣ ಕೊಟ್ಟು ಕಳಿಸಬೇಕು.

**ಕಾಂಚನ** - ಅಲ್ಲರಿ ಕೇವಲ ಹುಡುಗರನ್ನು ಕೊಲೆ ಮಾಡುವುದಕ್ಕಾಗಿ 10 ಸಾವಿರ ರೂಪಾಯಿಗಳನ್ನು ಕೊಟ್ಟಿರುವಿರಿ. ಪುನಾಃ ಹಣ ಮತ್ತೇ ಕೊಡಬೇಕೇ?

**ವಿಶ್ವಚಂದ್ರ** - ಅವರ ವಿಷಯ ಸಂಪೂರ್ಣ ನಿನಗೆ ಗೊತ್ತಿಲ್ಲ. ಅವರು ಮಹಾ ದರೋಡೆಕೋರರು ಅಷ್ಟೇ ಕೊಲೆಗಾರರು. ಅಂತವರನ್ನು ನಮ್ಮ ಬಲೆಯಲ್ಲಿ ಹಾಕಿಕೊಂಡರೆ ಸಾಕಷ್ಟು ಹಣ ಗಳಿಸಬಹುದು. ನಮಗೆ ಬೇಡಾದವರನ್ನು ಸುಲಭವಾಗಿ ಕೊಲೆ ಮಾಡಿಸಬಹುದು.

**ಕಾಂಚನ** - ಹೌದಾ ಇಂತವರು ಅದು ಹೇಗೆ ನಿಮಗೆ ಪರಿಚಯ ವಾದರು,

**ವಿಶ್ವಚಂದ್ರ** – ಅವರ ಪರಿಚಯವಾಗಿ ಬಹುದಿನಗಳೇನು ಆಗಿಲ್ಲ. ಮೊದಲು ನಾನು ಅವರನ್ನು ಎಲ್ಲಿಯೂ ನೋಡಿಯೋ ಇರಲಿಲ್ಲ.

**ಕಾಂಚನ** – ನೀವು ಈ ಊರಿಗೆ ಬಂದಾಗಲೇ ಪರಿಚಯವಾದರೇ ?

**ವಿಶ್ವಚಂದ್ರ** – ಹೌದು ನಾನು ಈ ಊರಿಗೆ ಬಂದು ಬಸ್ ಇಳಿದ ನಂತರ ಮೊದಲನೆಯ ಬೆಟ್ಟಿ ಇವರದೇ ಎರಡನೆಯ ಬೆಟ್ಟಿ ನಿನ್ನದು.
[ಅಷ್ಟರಲ್ಲಿ ಧರೋಡೆಸಿಂಗ್ ಪ್ರತಾಪಸಿಂಗ್ ಬರುವರು ಕೈಯಲ್ಲಿ ಮಚ್ಚು ಮಚ್ಚಿಗೆ ರಕ್ತ ಹತ್ತಿರುವದು ]

**ವಿಶ್ವಚಂದ್ರ** – ಏನು ಬಹದ್ದೂರ್ ಸಿಂಗ್‌ಗಳೇ ನಿಮ್ಮ ಕೆಲಸವನ್ನು ನಾವು ಹೇಳಿದಂತೆ ಸಂಪೂರ್ಣ ಮಾಡಿ ಬಂದಿರುವಿರಾ.

**ಪ್ರತಾಪಸಿಂಗ್** – ಮಾಡಿ ಬಂದಿರಾ ಎಂದು ಕೇಳುತ್ತಿದ್ದಿರಲ್ಲಾ, F.D.C. ಯವರೇ. ಈ ಕೈಯ್ಯಾಗಿನ ಆಯುಧವನ್ನಾದರೂ ನೋಡಿ ಗುರ್ತಿಸಿರಿ.

**ಧರೋಡೆಸಿಂಗ್** – F.D.C. ಯವರೇ ಯಾವ ಕಡಿತಾ ಕಡಿದೀವಿ ಅಂದ್ರೆ ಹಂಗ ಹಂಗ ಕುರಿ ಕಡದಂಗ ಕಡಿದು ಚೂರು ಚೂರು ಮಾಡಿ ಚೀಲಕ್ಕ ತುಂಬಿ ಹುಗುದುಬಿಟ್ಟೀವಿ.

**ಕಾಂಚನ** – ವಿಶ್ವ ಮೊದಲು ಮನೆಗೆ ಹೋಗೋಣ ನಡೆ.

**ವಿಶ್ವಚಂದ್ರ** – ಸರಿ ಹೋಗೋಣ. ಹಾ. ಸಿಂಗ್‌ಗಳೇ ಇನ್ನೆಷ್ಟು ಹಣ ಬೇಕೆ ನಿಮಗೆ.

**ಪ್ರತಾಪ್‌ಸಿಂಗ್** – ಬೇಕು ಅಂತ ಕೇಳುತಾ ಇದಿರಲ್ಲ, ನಾವು ಹುಟ್ಟಿರುವದೇ ಹಣಕ್ಕಾಗಿ, ಹೆರವರ ಪ್ರಾಣ ತೆಗೆಯುವುದಕ್ಕಾಗಿ.

**ವಿಶ್ವಚಂದ್ರ** – ತೆಗೆದುಕೊಳ್ಳಿ 5 ಸಾವಿರ ರೂಪಾಯಿ ಇವೆ ಆಗಾಗ ನನ್ನನ್ನು ಕಾಣುತ್ತಾ ಇರಿ.

**ರೋಡೆಸಿಂಗ್** – ನಮ್ಮ ಸಹವಾಸ ನೀವು ಮಾಡಿರಿ ಅಂದ ಮೇಲೆ ನಾವು ನಿಮ್ಮನ್ನು ಮರಿತೀವಿ ಏನ್ರಿ, ನೀವೇನು ಹೆದರಬೇಡರಿ. ಬೇಕಾದ್ದು ಒಂದ್ರು ದಕ್ಕಿಸಿ ಬಿಡತೀವಿ. ಎಂತೆಂಥ ಅಧಿಕಾರಿಗಳು ನಮ್ಮ ಹಿಂದೆ ಹಂದಿಯಾಗಿತಿರುಗುತ್ತಾರೆ ಅಂದ ಮೇಲೆ ನಮಗೇನ್ರಿ ಭಯ. ನಾವು ಬರತೀವಿ.

**ಪ್ರತಾಪಸಿಂಗ್** – ಬರ್ತೀವಿರಿ ಸಾಹೇಬರ.

**ವಿಶ್ವಚಂದ್ರ** – ಹೋಗಿ ಬನ್ನಿ. [ ಇಬ್ಬರು ಹೋಗುವರು ] ನಡೆ ಕಾಂಚನ ಹೋಗೋಣ.

## ಪ್ರವೇಶ ೬ [ ರಸ್ತಾ ]

[ ಧರ್ಮಣ್ಣ – ದಾನ ಇಬ್ಬರೂ ಮಾತನಾಡುತ್ತ ಬರುವರು ]

**ಧರ್ಮಣ್ಣ** – ದಾನ ಸುಮ್ಮನೆ ನಿನ್ನ ಮೈ ಮುಗ್ಗುಲಾಗಂಗ ಹೊಡಿಸಿದ್ನೆಪಾ. ಆ ಮುಂಡೆಮಕ್ಕಳು ಇಷ್ಟಾಕೊಂದು ಹೊಡಿತಾರ ಅಂತ ನಾ ತಿಳಕೊಂಡಿರ್ಲಿಲ್ಲ ಬಿಡು.

**ದಾನ** – ಅಲ್ಲರಿ ದಾನಸೂರ ಧರ್ಮಣ್ಣನವರೇ ಅವರ ಕೈಗೆ ಸಿಕ್ಕವರನ್ನ ಯಾರ್ನ ಬಿಡ್ತಾರ್ರೀ ಅವ್ರು, ನೀವಾದ್ರು ಬಂದು ಬಿಡುಸ್ತಾರ ಅಂತ ನೋಡಿದೆ ನೀವು ಸ್ಟೇಷನ್ ಮುಂದೆ ಆರಾಮು ಕಾಲು ಮೇಲೆ ಕಾಲು ಹಾಕಿಕೊಂಡು ಬೀಡಿ ಸೇದುತ್ತಿದ್ದೀರಿ ನಿಮಗ ಆ ಬಡ್ತಾ ಬಿದ್ದಿದ್ದರೆ ನೀವು ಏನಾಕ್ಕಿದ್ದಿರಿ.

**ಧರ್ಮಣ್ಣ** – ಕುಣಿಯಾಗ ಕುಂದ್ರುಸೋ ಹೆಣ ಆಗ್ತಿದ್ದೆ ಅದೇನೆ ಇರಲಪ್ಪ ದಾನ ಹಿಂದಿನದೆಲ್ಲಾ ಮರೆತು ಬಿಡು ನಾವೆಲ್ಲ ಒಂದ ಊರಿನವರು ದಿನ ಬೆಳಕರದರೆ ಮುಖ ನೋಡುತೀವಿ ಅಂದಾಗ ದ್ವೇಷ ಕಟ್ಟಿಕೊಂಡು ಆಡ್ಡಾಡುವುದರಿಂದ ಏನೈತಿ.

**ದಾಸ** – ಛೀ ಛೀ ಮುಖ ಕೆಡಿಸಿಕೊಂಡು ಅಡ್ಡಾಡುವಂತೆದು ಏನಾಗ್ಯೆತ್ರಿ. ನಿಮ್ಮದರ 20 ಎಕರೆ ಏರಿ ಹೋಗಿಲ್ಲ ನಂದರಾ ಹೋಗಿಲ್ಲ ಅದರೆ ಮೈ ಮಾತ್ರ 3 ತಿಂಗಳು ಮ್ಯಾಕ ಏಳದಂಗ ಆಯಿತು.

**ಧರ್ಮಣ್ಣ** – ಹೋಗಲಿ ಬಿಡಲೆ ದಾಸ ಅದನ್ಯಾಕ ನೆನಿಸ್ಕೊಂತಿ ನೀನು ಅದರ ಸುದ್ದಿ ತಗದಿ ಅಂದರೆ ನನಗೆ ನಿದ್ದಿನೇ ಬರೋದಿಲ್ಲ.

**ದಾಸ** – ನಿಮಗ್ಯಾಕ ನಿದ್ದಿ ಬರೋದಿಲ್ಲರಿ!

**ಧರ್ಮಣ್ಣ** – ಯಾಕಲೇ ದಾಸ ಹಂಗ ಮಾತಾಡ್ತಿ.

**ದಾಸ** – ಹೌದ್ರಿ ನಿಮಗ ಒಂದು ಡ್ಯೂಟಿ ಏನು? ಬಡವರ ಸೊಂಟ ಮುರಿಯಾಕ ದನದ ಸಂತ್ಯಾಕ ಹೋಗಬೇಕು, ಸಂಜಿ ಆತು ಅಂದು ಕೂಡ್ಲೆ ಆ ಸೂಳಿ ಸುಂಕವ್ವನೊಂದಿಗೆ ಹೋಗಬೇಕು. ಮಧ್ಯಾನ್ನ ಆ ಮಾಳಿಗೆ ಮನೆ ಮರಿಯವ್ವನ ಹತ್ತಿರ ಹೋಗಬೇಕು. ಇಷ್ಟೆಲ್ಲಾ ಡ್ಯೂಟಿ ಇಟ್ಟು ಕೊಂಡು ನಿಮಗೆ ಹ್ಯಾಂಗ ನಿದ್ದಿ ಬರುತ್ತೈತಿ.

**ಧರ್ಮಣ್ಣ** – ಏ ದಾಸ ಮೆಲ್ಕ ಮಾತಾಡಲೇ ಇದು ಬಜಾರ ಯಾರಾದರೂ ಈ ಸುದ್ದಿ ಕೇಳಿಸಿಕೊಂಡರೆ ನಮ್ಮನ್ನ ಮಾನಗೇಡಿ ಮಾಡ್ಯಾರು ಯಾಕಂದ್ರ ನಾವು ಇದುವರಿಗೂ ಇಂತಹ ಕೆಲಸ ಪಬ್ಲಿಕ್ ಇಟ್ಟುಕೊಂಡಿಲ್ಲ ಎಲ್ಲಾ ಒಳಗೇ ನಡ್ಸೀನಿ.

**ದಾಸ** – ಅದಕ್ಯಾಕ ಹೆದರತೀರಿ ಯಾರು ಮಾಡಲಾರದ ಕೆಲಸ ನೀವು ಬೇರೆ ಮಾಡಿಲ್ಲ.

**ಧರ್ಮಣ್ಣ** – ಲೇ ನಾವು ಏನ್ ಮಾಡಿದ್ರು ಗೌಪ್ಯವಾಗಿ ಮಾಡಬೇಕು. ಎಲ್ಲಾರಿಗೂ ಗೊತ್ತಾದಂಗ ಮಾಡಿಬಿಟ್ರ ಚಿಲ್ರೆ ಸಣ್ಣ ಮಕ್ಕಳು ಆಕ್ಕಿವೆಲೇ.

**ದಾಸ** – ನಿಮ್ಮಷ್ಟು ಚುರುಕು ಬುದ್ದಿ ನಮ್ಮದಲ್ರಿ.

**ಧರ್ಮಣ್ಣ** – ಲೇ ಹುಡುಗ ಅಂದಂಗ ಮಾಳಿಗಿಮನಿ ಮರಿಯವ್ವನ ಮನಿ ಪಕ್ಕಕ್ಕ ಒಂದು ಹೈಕ್ಲಾಸ್ ಹುಡಿಗಿ ಸೂಳಿ ಬಿಟ್ಯಾರಲೇ

**ದಾನ** – ಈಗ ನನ್ನನ್ನೇನು ಮಾಡಂದರಿ?

**ಧರ್ಮಣ್ಣ** – ಎಲ್ಲಾರು ಮಾಡೋದು ನೀನು ಮಾಡಬೇಕಪ್ಪ ಅಬಾಬಾಬಾ ಆ ಹುಡಿಗಿ ಯಂಗೈತಂಬಲೇ ಆ ಹುಡಿಗಿನ ನೋಡಿಬಿಟ್ರೆ ನಾನೇ ಹೋಗಿ ಬಿಡ್ಲೇನೋ ಅನುಸ್ತತಿ.

**ದಾನ** – ಹೋಗಿ ಬಿಡ್ರುಲ್ಲಾ! ಅದಕ್ಯಾಕ ಚಿಂತಿ ಮಾಡತೀರಿ.

**ಧರ್ಮಣ್ಣ** – ನಾನೆಲ್ಲಿ ಬಿಡ್ತಿನ್ನಲೇ ಆ ಹುಡಿಗಿ ವಯಸ್ಸ್ನ ಬಾಳ ಸಣ್ಣದೈತಲೇ.

**ದಾನ** – ಅದನ್ನ ಅಡ್ಜಸ್ಟ್ ಮಾಡ್ಕೋ ಬೇಕ್ರಪ್ಪ ನಿಮ್ಮ ಸೈಜಿನವ ಅಂದ್ರ ಎಲ್ಲಿ ಸಿಕ್ತಾವು.

**ಧರ್ಮಣ್ಣ** – ಲೇ ದಾನ! ದನದಂತಹಾಸ ನಾನೊಂದು ನಮೂನಿ ಮಾತನಾಡಿದ್ರೆ ನೀನೊಂದು ನಮೂನಿ ಮಾತನಾಡ್ತಿಯಲ್ಲಲೇ, ಎಲ್ಲರು ಸೈಜ್ ನೋಡಿ ಸೂಳೆರ್ಗೆ ಹೊಕರೇನಲೇ ವಯಸ್ಸಿನಾಗ ನನಗಿಂತಲೂ ಬಾಳ ಸಣ್ಣಕಿ ಅದಳಪ ಅಂದೆ.

**ದಾನ** - ಹೋಗ್ಲಿ ಬಿಡ್ರಿ ಆ ಸುದ್ದಿ ನಮುಗ್ಯಾಕೇ.

**ಧರ್ಮಣ್ಣ** - ಹಂಗಲ್ಲಲೇ ನೀನು ಒಂದು ನಮೂನಿ ಬೀಜದ ಹೋರಿ ಇದ್ದಂಗ ಅದಿದಿ. ಅವರ ನನಗೆ ಫೀಸು ಕೊಡ್ತಾರಾ ಒಮ್ಮೆ ಹೋಗಿ ಬರ್ತಿಯೇನೋ ಅಂದೆ.

**ದಾನ** - ಧರ್ಮಣ್ಣರೆ ಬ್ಯಾಡ್ರುಪಾಯ:ಪ್ಪಾ ಏನು ಮಾಡ್ತಾರ್ದನೇ ಮೈ ಮುಗ್ಲ್ಲ ಮಾಡ್ಯಾರ, ಇನ್ನು ಮಾಡಿದ್ರೆ ಸುಡುಗಾಡಿಗೆ ಕಳಸ್ತಾರ. ನೀವು ಇದರಾಗ ಸರ್ವಿಸ್ ಅದಿರಿ, ನಿಮಗೇ ಇರಲಿ ನಡಿ ನಡ್ರಿ ಹೊತ್ತಾತ,

**ಧರ್ಮಣ್ಣ** - ಹೋಗನು ಬಾರ್ಲೆ ಮಾತಿನ್ಯಾಗ ಹೊತ್ತೆ ಗೊತ್ತಾಗಲಿಲ್ಲ.

**ದಾನ** – ಅಲ್ರಿ ಧರ್ಮಣ್ಣರೇ ಇವತ್ತು ಯಾರ ಮನಿಗೆ ಪ್ರೋಗಾಂ ಹಾಕ್ಕೊಂಡಿರಿ.

**ಧರ್ಮಣ್ಣ** – ಬಾಳದಿವಸ ಆತಲೇ ಮಾಳಿಗಿ ಮರಿಯುವ್ವನ ಮನಿಗೆ ಹೋಗಿಲ್ಲ! ಇವತ್ತು ಅಲ್ಲಿಗೆ ಹೊಕ್ಕೀನಿ ಮತ್ತ ನೀನು ಯಾರ ಮುಂದೆ ಹೇಳಬ್ಯಾಡ್ಲೆ ತಮ್ಮ.

**ದಾನ** – ಛೀ ಛೆ ನಾನ್ಯಾಕ ಹೇಳಾಕ ಹೋಗಲ್ರಿ, ತಡ ಆಕ್ಕೈತಿ ಮೊದುಲು ಹೊಗ್ರಿ.

**ಧರ್ಮಣ್ಣ** – ಜೊತೆಗೆ ಅತಾತ ಹೋಗೋನು ಬಾರ್ಲೆ.

**ದಾನ** – ಒಲ್ರಿಪಾ ನಾನು ಸ್ವಲ್ಪ ಪ್ಯಾಟ್ಯಾಗ ಕೆಲಸ ಐತಿ ಅದನ್ನ ಮುಗಿಸಿಕೊಂಡು ಮನಿಗೆ ಹೊಕ್ಕೀನಿ.

**ಧರ್ಮಣ್ಣ** – ಹಂಗಾರ ನಾನು ಹೋಗಿ ಬರ್ಲ್ಯಾ!

**ದಾನ** – ಹೋಗಿ ಬರ್ರಿ.

**ಧರ್ಮಣ್ಣ** – ಆಗಾಗ ನೀನು ನಮ್ಮ ಮನೆ ಕಡೆಗೆ ಬರ್ತಾ ಇರ್ಲೆ ದಾನ
[ ಆನಂದದಿಂದ ಹೋಗುವನು ]

**ದಾನ** – ಹಂಗ ಮಾಡ್ರಿ, ಹೀಗ ಮಾಡ್ರಿ [ ಧರ್ಮ ಹೋದಕಡೆ ನೋಡುತ್ತ ] ಎಲೇ ಮಗನಾ ಧರ್ಮ ಇವತ್ತು ಸಿಕ್ಯಾ ನನ ಕೈಯಾಗ ಮತ್ತ ಇಂತಾದ್ರಾಗ ಈ ಮಗ ಯಾವಾಗ ಸಿಕ್ಯಾನು ಅಂತ ಕಾಯುತಿದ್ದೆ. ಮನಿಯಾಗ ವಯಸ್ಸಿಗೆ ಬಂದ ತಂಗಿ ಇಟ್ಟುಕೊಂಡು ತಾನು ಇಂಥಾ ಚಿಲ್ರೆ ಕೆಲ್ಸ ಮಾಡಿಕೊಂತ ಅಡ್ಡ್ಯಾಡತಾನ ನೋಡ್ರಿ, ಹೋಗಲೇ ಹೋಗು ನನ್ನ ರಸ್ತೆದಾಗ ಹಿಡಿದು ಕಳಿಸಿ ಬಡಿಸಿದ್ದ ಈ ಮಗ, ಇವನ್ನ ನಾನೆಂಗ ಹಿಡಿದು ಕಳಿಸ್ತೀನಿ ನೋಡ್ರಿ ಅವನು ಹೋದ ಮನಿ ಮುಂದಕನಾ ಜೀಪ್ರ ಕಳಿಸ್ತೀನಿ ಈಗ ಸದ್ಯ ಪೋಲೀಸ್ ಸ್ಟೇಷನ್‌ಗೆ ಹೋಗಿ ದೊಡ್ಡ ಸಾಹೇಬರ ಮುಂದ ಎಲ್ಲಾ ಹೇಳಿ 7–8 ಮಂದಿ ಪೋಲೀಸರು ಅಲ್ಲಿಂದಾನೆ ಅವನ ಒದುಕೊಂತ ಬರಬೇಕು ಹಂಗ ಮಾಡ್ತೀನಿ. [ ಎದುರಿಗೆ ಪೋಲೀಸ್ ಬರುವನು ] ಓ ಹೋ ನಮಸ್ಕಾರ್ರಿ ಸಾಹೇಬ್ರು ಒಳ್ಳೆಯ ಸಮಯಕ್ಕೆ ಬಂದ್ರೆಲ್ಲಾ.

**ಪೋಲೀಸ್** – ಯಾಕಲೇ ದಾನ ಏನಾತು?

**ದಾನ** – ಏನಿಲ್ರಿ ಸಾಹೇಬ್ರಾ ಮೊನ್ನೆ ನನ್ನ ನೀವು ಹಿಡಿದಿದ್ರೆಲ್ಲಾ ಅಂತಹ ಕೇಸ! ನಾನು ನಿಮಗೆ ಹಿಡಿದುಕೊಡ್ತೀನ್ರಿ!

**ಪೋಲೀಸ್** – ಯಾರಲೇ ಅವನು?

**ದಾನ** – ಅವನರೀ ಕಲಿಯುಗದ ಧರ್ಮರಾಯ.

**ಪೋಲೀಸ್** – ಯಾರು ದಲಾಲಿ ಧರ್ಮಣ್ಣಾ.

**ದಾನ** – ಊನ್ರಿ ಅದ ಹೋಳಿ ಕಾಮಣ್ಣ ಆ ದಿವಸ ಸುಮ್ನ ನನ್ನ ಮೈ ಮೆತ್ತಗ ಮಾಡಿದ್ರಿ ಆ ಸುಂಕವ್ವನ ಮನಿ ಎಲ್ಲೈತೋ ನಾ ನೋಡಿಲ್ಲ ಆಕಿ ಮನಿಗೆ ಹೋದಾವ ಅದೇ ಧರ್ಮಣ್ಣರೀ.

**ಪೋಲೀಸ್** – ನಡಿಯಲೇ ಹಂಗಾರ ಹೋಗೋನು.

**ದಾನ** – ನೀವು ಒಬ್ಬರೆ ಹೋಗೋದು ಬ್ಯಾಡ್ರಿ ಅವನು ಬಾರಿ ಬದ್ಮಾಸ್ ನನಮಗ ಆದಾನ ನಿಮ್ಮನ್ನ ನೋಡಿದ್ರೆ ಸಾಕು ಓಡಿ ಹೋಗಿ ಬಿಡುತ್ತಾನ.

**ಪೋಲೀಸ್** – ಇರಲಿ ನಡಿಯಲೇ ಇಂತವರನ್ನ ಎಷ್ಟು ನೋಡಿ–ರ್ಲಿಕ್ಕಿಲ್ಲ ನಾವು.

**ದಾನ** – ಬ್ಯಾಡ್ರಿ ಸಾಹೇಬರೇ ನನ ಮಾತು ಕೇಳ್ರಿ ಐದಾರು ಮಂದಿ ನಿಮ್ಮ ಜೊತೆ ಕರಕೊಂಡು ನಿಮ್ಮ ಜೀಪು ತಗೊಂಡು ಅಲ್ಲಿಗೆ ಹೋಗ್ರಿ. ಅಲ್ಲಿಂದಾನ ಅವನ್ನ ನಾದಿಕೊಂತ ಬರ್ರಿ, ಒಂದೊಂದು ಒದಿಕಿಗೆ ಒಂದೊಂದು ನೂರರ ನೋಟು ತಗಿತಾನ ಅವ.

**ಪೋಲೀಸ್** – ಅಷ್ಟೊಂದು ಹಣ ಗಳಿಸ್ಯಾನೇನು ಅವ?

**ದಾನ** – ಗಳಿಸ್ಯಾನಂತ ಕೇಳ್ತಿರಲ್ಲರಿ ದಲಾಲಿ ಮಾಡಿ ಮಾಡಿ ಬಡವರ ಗೋಣು ಮುರಿದು ನಲವತ್ತು ಸಾವಿರ ರೂಪಾಯಿ ಬ್ಯಾಂಕಿನಾಗ ಇಟ್ಟಾನ್ರೀ

ಸಾಹೇಬರೇ, ನಿಮುಗ ಏಳೋದು ಏನೈತ್ರಿ, ಅವನ ನಲವತ್ತು ಸಾವಿರ ನಿಮ್ಮಕಡೆ ಸೇರೋತನಕ ಅವನ್ನ ಹೊರಗ ಬಿಡಬ್ಯಾಡ್ರಿ.

**ಪೋಲೀಸ್** – ಇಷ್ಟೊಂದು ಗೊತ್ತಾದ ಮೇಲೆ ನಾವಲ್ಲ ಬಿಡ್ತೀವ ಅವನ್ನ ಒಂದು ವರುಷ ಆಗವಲ್ಲದ್ಯಾಕ ಒಳಗ ಹಾಕ್ಕೊಂಡು ನಾದತೀವಿ.

**ದಾನ** – ಆ. ಅಷ್ಟು ಮಾಡ್ರಿ ಸಾಹೇಬರ. ಮೊದಲು ಹೋಗ್ರಿ ಇಲ್ಲಿಂದ ಈಗ ಆ ಮಾಳಗಿಮನಿ ಮರಿಯುವ್ವನ ಮನ್ಯಾಗ ಅದಾನನೋಡ್ರಿ.

**ಪೋಲೀಸ್** – ಸರಿ. ನಾನೇ ಹೋಗ್ತಿನಿ ನೀನಂದಂಗ ಜೀಪು ತಗೊಂಡು ಹೋಕೀವಿ ಅಲ್ಲಿಗೆ [ಪೋಲೀಸ್ ಹೋಗುವನು]

**ದಾನ** – ಈ ಮಗ ಧರ್ಮಣ್ಣ ಈಗ ಅವ ನೋಡ್ರಿ ಕಾಮಣ್ಣ ಮಗನ ಅವರು ಒದಿಯಾಕ ಹತ್ತಿದರು ಅಂದ್ರ ಚಂದ್ರಗುತ್ಯಾಗ ಬತ್ತಲ ಸೇವೆ ಮಾಡಿದಂಗ ಆಕೈತಿ ನೋಡ್ರಿ. ಆಗಲಿ ಇದು ಒಂದು ನಮಗ ಅನುಕೂಲನ ಆತು. ಆ ಮಗ ಊರಗ ಇದ್ದಿದ್ರ ಅವನ ತಂಗಿ ಮದಿವಿ ಮಾಡ್ತಿದ್ದಿಲ್ಲ ನನಗೆ ಕೆಂಪಿ ಸಿಗುತಿದ್ದಿಲ್ಲ. ಈಗ ಸದ್ಯ ಕೆಂಪಿ ಮನಿಗೆ ಹೋಗಿ ಎಲ್ಲಾ ಸಿದ್ದತೆ ಮಾಡಿಕೊಂಡು ಧರ್ಮಸ್ಥಳಕ್ಕೆ ಹೋಗಿ ತಾಳಿ ಕಟ್ಟಿಕೊಂಡೇ ಬಂದುಬಿಡ್ತೀವಿ. [ದಾನ ಹೋಗುವಷ್ಟರಲ್ಲಿ ಕೆಂಪಿ ಬರುವಳು] ಅಯ್ಯೋ ಕೆಂಪಿ ನೀನು ಇಲ್ಲಿಗೆ ಬಂದ್ಯಾ ?

**ಕೆಂಪಿ** – ಮತ್ತೇನು ಮಾಡ್ಲಿ ಮನ್ಯಾಗ ಒಬ್ಬಾಕಿ ಕುಂತುಕೊಂಡು ಕುಂತುಕೊಂಡು ಸಾಕಾಗಿ ಹೋಯ್ತು. ಕಡಿಗೆ ನೀನಾದರೂ ಬರಲಿಲ್ಲ. ನಮ್ಮಣ್ಣ ಸಂತ್ಯಾಗ ಹೋದಾವ ಆವನಾವರು ಬರಲಿಲ್ಲ. ಅದಕ ನಿಮ್ಮನ್ನ ಹುಡಿಕೊಂತ ಬಂದೆ.

**ದಾನ** – ಏ ಕೆಂಪಿ ಸಂತ್ಯಾಕ ಎಲ್ಲಿ ಹೋಗ್ಯಾನ ?

**ಕೆಂಪಿ** – ಮತ್ತ ಎಲ್ಲಿಗೆ ಹೋಗ್ಯಾನ.

**ದಾನ** – ಚಂದ್ರಗುತ್ತ್ಯಾಗ ಬತ್ತಲ ಸೇವೆ ಬರ್ಜರಿ ನಡಿತ್ತೈತಿ ಅಂತೆ ನೋಡಿಕೊಂಡು ಬರಾಕ ಹೋಗ್ಯಾನ.

**ಕೆಂಪಿ** – ಮತ್ತೆ ಯಾವಾಗ ಬರ್ತ್ಯಾನ.

**ದಾನ** – ನಮ್ಮಿಬ್ಬರ ಮದುವೆ ಆಗಿಂದ ಬರ್ತ್ಯಾನ.

**ಕೆಂಪಿ** – ಯಾಕ? ಅಷ್ಟ್ಯಾಕ ತಡ ಮಾಡ್ತ್ಯಾನ.

**ದಾನ** – ಜಾತ್ರೆ ಮುಗಿಸಿಕೊಂಡು ದೇಶನ್ನೆಲ್ಲಾ ತಿರುಗಾಡಿ ಕಡಿಗೆ ಕುದುರಿವೋತಿ ಸ್ವಾಮಿಗಳ ದರ್ಶನ ತಗೊಂಡು ಬರ್ತ್ಯಾನ!

**ಕೆಂಪಿ** – ಅಂತೂ ಈ ವರ್ಷದಾಗ ಬರ್ತ್ಯಾನ?

**ದಾನ** – ನಿನ್ನ ಹೊಟ್ಯಾಗ ಕೂಸು ನಿಂತಾಗ ಬರ್ತ್ಯಾನ.

**ಕೆಂಪಿ** – ಸಾಕು ಬಾಯಿ ಮುಚ್ಚು ಉತ್ತರ ಕೊಡದ್ರಾಗ ನೀನು ಬಹದ್ದೂರು ಗಂಡ್ಸು ಅದಿ ನೋಡ.

**ದಾನ** – ನಾನು ಬಹದ್ದೂರ್ ಗಂಡು ಆಗದಿದ್ದರೆ ನೀನು ಎಂಗ ಒಲಿತಿದ್ದೆ ನನಗೆ. ಏ ಕೆಂಪಿ ತಡ ಮಾಡೋದಾ ಬ್ಯಾಡ ಧರ್ಮಸ್ಥಳಕ್ಕೆ ಹೋಗಿ ತಾಳಿ ಕಟ್ಟಿಕೊಂಡು ಬಂದು ಬಿಡನನಡಿ. ನಮ್ಮಿಬ್ಬರ ಲಗ್ನ ಎಂಗ ಆಗ್ತೈತಂದಿ.

**ಕೆಂಪಿ** - ಲಗ್ನ ಮಾಡಿಕೊಂಡು ಬರೋನ್‌ನಡಿ ಅಂತ ಎಷ್ಟು ಸುಲಭ ವಾಗಿ ಹೇಳತಿಯಲ್ಲಾ ಲಗ್ನ ಅಂದ ಮೇಲೆ ನನಗೊಂದು ರೇಷ್ಮೆ ಸೀರ್ಯಾರ ಭ್ಯಾಡೇನು?

**ದಾನ** - ಅದಕ್ಯಾಕ ಚಿಂತಿ ಮಾಡ್ತಿ ನಡಿಯೋ ನಮ್ಮಪ್ಪ ಮಣಕನ್ನ ತರಬೇಕಂತ ಒಂದು ಸಾವಿರ ರೂಪಾಯಿ ಕೊಟ್ಟಾನ ಮಣಕನ್ನ ತರಬೇಕಂದ್ರು ನಿಮ್ಮ ಅಣ್ಣನು ಜಾತ್ರಿ ಮಾಡಿಕೊಂಡು ಬರಕ ಹೋಗ್ಯಾನ ಆದಕ್ಕ ಆದೇ ಸಾವಿರ ರೂಪಾಯಿದಾಗ ನಿನಗೊಂದು ಒಳ್ಳೆ ರೇಷ್ಮೆಸೀರಿ ತರತೀನಿ ನಡಿ.

ಕೆಂಪಿ - ಅಯ್ಯೋ ಹಂಗಾರ ತಡ ಮಾಡದಂಗ ಹೋಗೋನು ಬಾರ.

[ ಕೆಂಪಿ ಒಂದು ಹೆಜ್ಜೆ ಮುಂದೆ ಇಡುವಳು  ದಾನ ಸೆರಗು ಹಿಡಿದೆಳೆದು ]

ದಾನ - ನಿಲ್ಲೆ ಕೆಂಪಿ ಇದೇ ಅದಂವದಾಗ ಒಂದು....

– ಜೋಡಿ ಹಾಡು –

ಗಂಡು – ಅಲಿಲೇ ನಾಜೂರುನಾರಿ ।
ಹೆಂಗೈತಿ ನಮ್ಮೀಜೋಡಿ ।
ಹೆಣು – ಹೊ ಹೊ ಹೊ.... ಬೆಡಗಿನ ರಾಯ ।
ನನಗೀಗ ಬಂತೋ ಪ್ರಾಯ ।
ಗಂಡು – ನಾಕಂಡ ಹೆಣ್ಣೆಲ್ಲಾ ಬಲು ಮೋಸ ಆಗತ್ತೈತಿ ।
ನನಗೆ ಪಿರೂತಿ ಬಂದೈತಿ ]
ನೀನಿಲ್ದೆ ನಾನಿಲ್ಲ ನಾನಿಲ್ದೆ ನೀನಿಲ್ಲ ।
ನಿನ್ನಬಿಟ್ಟು ನಾನೆಂದು ಬಾಳೋಲ್ಲಾ ।
ಹೆಣ್ಣು – ಹಗಲಿಲ್ಲ ಇರುಳಿಲ್ಲ ನಿನ ಚಿಂತೆ ಮಾಡ್ತಿದ್ದೆ ।
ಕಡೆಗಿಂದು ನೀನೇ ಸಿಕ್ಕಿಬಿದ್ದೆ
ದುಡ್ಡಿದ್ರೆ ದೊಡ್ಡಪ್ಪ ನೀನೊಬ್ಬನೇ ಸಾಕಪ್ಪ
ಬೇರೇನು ಬೇಡಪ್ಪ ॥



## ಪ್ರವೇಶ ೧೦ [ಮನೆ ಪ್ಲಾಟ್]

[ ಅರ್ಚನಳ ಮನೆ. ಸೂರ್ಯಚಂದ್ರ ಕಾರ್ ಆಕ್ಸಿಡೆಂಟ್‌ಗೆ ಸಿಕ್ಕಿ ಎರಡು ಚಪ್ಪೆ ಕಳೆದುಕೊಂಡು ಹಣೆಗೆ ಪಟ್ಟಿ ಕಟ್ಟಿಕೊಂಡು ನರಳುತ್ತಾ ಮಂಚದ ಮೇಲೆ ಮಲಗಿರುವನು. ಅರ್ಚನಾ ಸೂರ್ಯಚಂದ್ರನ ಕಾಲಿಗೆ ಮುಲಾಮು ಹಚ್ಚುತ್ತಾ ಇರುವಳು ]

**ಅರ್ಚನ** – ಅಲ್ಲರಿ ಸ್ವಲ್ಪ ಹೊತ್ತು ರೆಸ್ಟ್ ತೆಗೆದುಕೊಳ್ಳಿ ನೀವೇಕೆ ಚಿಂತೆ ಮಾಡುತ್ತೀರಿ ಡಾಕ್ಟರ್ ಎಲ್ಲಾ ಹೇಳಿದ್ದಾರೆ. ಮತ್ತೆ ನಿಮ್ಮ ಕಾಲು ಮೊದಲಿನಂತೆ ಆಗುತ್ತದೆ ಎಂದು ಹೇಳಿದ್ದಾರೆ. ನೀವು ಯಾವ ತರದ ಆಲೋಚನೆ ಮಾಡದೆ ಸುಮ್ಮನೆ ಮಲಗಿಕೊಳ್ಳಿ.

**ಸೂರ್ಯಚಂದ್ರ** – ಅರ್ಚನಾ ನಾನು ಬದುಕುತ್ತೀನಿ ಎಂಬ ನಂಬಿಕೆ ನನಗಿಲ್ಲದಾಗಿದೆ. ಏಕೆಂದರೆ ನನ್ನ ಎರಡು ಕಾಲುಗಳು ಮುರಿದು ಹೋಗಿರುವಾಗ ಜೀವದಿಂದ ಇದ್ದರೂ ಸರಿ. ಸತ್ತರೂ ಸರಿ.

**ಅರ್ಚನ** – ಸ್ವಾಮಿ ಹಾಗೆನ್ನಬೇಡಿ. ಈಗಿನ ಕಾಲದಲ್ಲಿ ಹಣ ಇದ್ದರೆ ಸಾಕು ಹೆಣವನ್ನು ಬದುಕಿಸುವ ಸಾಧನೆ ಮಾಡುವಂತಹ ವೈದ್ಯರು ಇದ್ದಾರೆ ಅಂದಾಗ ನಿಮ್ಮ ಕಾಲು ಸರಿ ಮಾಡುವುದು ಅಷ್ಟೇನು ತೊಂದರೆ ಅಲ್ಲ ಡಾಕ್ಟರಿಗೆ. ಈ ಟಾನಿಕ್ ತೆಗೆದುಕೊಳ್ಳಿ ನಿದ್ದೆ ತಾನಾಗಿಯೇ ಬರುತ್ತದೆ, [ ಟಾನಿಕ್ ಕುಡಿಸುವಳು ]

**ಸೂರ್ಯಚಂದ್ರ** – ಯಾವ ವಿಷ ಗಳಿಗೆಯಲ್ಲಿ ಮನೆಯಿಂದ ಹೋದೆನೋ ಏನೋ ? ಕಾರಿನ ಬಾಯಿಗೆ ಸಿಕ್ಕೆನು. ನನ್ನನ್ನು ಈ ರೀತಿ ಮಾಡಬೇಕೆಂದು ಆ ದೇವರಿಗೆ ಆಸೆ ಇತ್ತೋ ಏನೋ ಅಂತೆಯೇ ಹೀಗಾಯಿತು

ನನ್ನ ಜೀವನ. ನಾವಿಬ್ಬರು ಅತ್ಯಂತ ಪ್ರೀತಿಯಿಂದ ಇರುವುದನ್ನು ನೋಡಿ ಆ ದೇವರಿಗೂ ಸಂಕಟವಾಗಿರಬಹುದು. ಅದಕ್ಕಾಗಿ ಈ ರೀತಿ ಮಾಡಿದ್ದಾನೆ ಆ ಚಾಂಡಾಲದೇವ!

**ಅರ್ಚನ** – ನಾವು ಮಾಡಿದ ಕರ್ಮಕ್ಕೆ ಆ ದೇವರು ಏನು ಮಾಡುತ್ತಾನೆ ಸ್ವಾಮಿ ನಮ್ಮ ನಮ್ಮ ಕರ್ಮವನ್ನು ನಾವೇ ಅನುಭವಿಸಬೇಕಲ್ಲಾ ಸುಮ್ಮನೆ ಏಕೆ ಮನಸ್ಸಿನಲ್ಲಿ ಚಿಂತೆ ಮಾಡುತ್ತಾ ಕೊರಗುತ್ತೀರಾ. ಹೆಚ್ಚು ಹೊತ್ತು ಮಾತನಾಡಬೇಡಿ ಸ್ವಲ್ಪ ಹೊತ್ತು ರೆಸ್ಟ್ ತೆಗೆದುಕೊಳ್ಳಿ.

**ಸೂರ್ಯಚಂದ್ರ** – [ದುಃಖಿಸುತ್ತಾ] ಅರ್ಚನಾ ಅರ್ಚನಾ

**ಅರ್ಚನ** – ಏಕೆ ಸ್ವಾಮಿ? ಹೀಗೇಕೆ ದುಃಖಿಸುವಿರಿ.

**ಸೂರ್ಯಚಂದ್ರ** – ನಾನು ಮಹಾ ಪಾಪಿ ಅರ್ಚನಾ ನಾನು ಮಹಾ ಪಾಪಿ.

**ಅರ್ಚನ** – ಏಕೆ ಹೀಗೆ ಮಾತನಾಡುವಿರಿ ಸ್ವಾಮಿ. ನೀವೇನು ಅಂತಹ ಪಾಪದ ಕೆಲಸವನ್ನು ಮಾಡಿದ್ದೀರಿ.

**ಸೂರ್ಯಚಂದ್ರ** – ಇದಕ್ಕಿಂತ ಇನ್ನಾವ ಪಾಪದ ಕೆಲಸವನ್ನು ಮಾಡಬೇಕು. ನೀನು ನನ್ನ ಸೇವೆಯನ್ನು ಮಾಡುವುದು ನೋಡಿದರೆ ಹೆತ್ತ ತಾಯಿಯಾಗಲಿ ಕೈ ಹಿಡಿದ ಹೆಂಡತಿಯಾಗಲಿ ಹೆತ್ತ ಮಕ್ಕಳಾಗಲಿ ಇಷ್ಟು ಸೇವೆ ಯಾರೂ ಮಾಡುತ್ತಿರಲಿಲ್ಲ. ನಿನ್ನ ಈ ವಾತ್ಸಲ್ಯವನ್ನು ನೋಡಿದರೆ ಹಿಂದಿನ ಜನ್ಮದಲ್ಲಿ ನೀನೇ ನನ್ನ ತಾಯಿಯಾಗಿರಬಹುದು.

**ಅರ್ಚನ** – ಇದೇನು ಸ್ವಾಮಿ ಎಂತಹ ಮಾತನ್ನು ಆಡುವಿರಿ, ನೀವು ನನಗೆ ದೊರತದ್ದು ಅದಾವ ಜನ್ಮದ ಪುಣ್ಯವೋ ಏನೋ ಕೈಹಿಡಿದ ಗಂಡನ ಸೇವೆ ನಾನು ಮಾಡದಿದ್ದರೆ ಆ ದೇವರಾದರೂ ಮೆಚ್ಚಬೇಕಲ್ಲ. ಇದರಲ್ಲಿ ನಿಮ್ಮ ತಪ್ಪು ಏನು ಇಲ್ಲ. ಸತ್ಯಹರಿಶ್ಚಂದ್ರನನ್ನು ಪರೀಕ್ಷಿಸಿದಂತೆ ನನ್ನನ್ನು ಪರೀಕ್ಷಿಸುವುದಕ್ಕಾಗಿ ನಿಮ್ಮನ್ನು ಈರೀತಿ ಮಾಡಿದ್ದಾನೆ ಆದೇವರು.

ನನಗೆ ಎಷ್ಟು ತೊಂದರೆ ಬಂದರೂ ನಾನು ಮಾತ್ರ ನಿಮ್ಮನ್ನು ಕೈಬಿಡುವುದಿಲ್ಲ.

**ಸೂರ್ಯಚಂದ್ರ** – ಅರ್ಚನಾ ಕಣ್ಣುಗಳು ಸೆಳೆಯ ಹತ್ತಿವೆ. ನಾಲಿಗೆ ಅಂಟಾಗುತ್ತಿದೆ. ಕಾಲಿನ ನರಗಳು ಜಗ್ಗ ಹತ್ತಿವೆ. ಈ ಭಾಧೆ ತಾಳಲಾರೆ.

**ಅರ್ಚನ** – ಸ್ವಾಮಿ ನೋವು ಹೆಚ್ಚು ಇರುವುದರಿಂದ ಹಾಗೆ ಆಗುತ್ತೆ ನಿಮಗೆ ಏನು ತೊಂದರೆ ಆಗುವುದಿಲ್ಲ, ಸ್ವಲ್ಪ ಹೊತ್ತು ವಿರಾಮ ತೆಗೆದು-ಕೊಳ್ಳಿ. ಇದೀಗ ಡಾಕ್ಟರ್ ಬರಬಹುದು.

**ಸೂರ್ಯಚಂದ್ರ** – [ಕೆಮ್ಮುತ್ತಾ] ಅರ್ಚನಾ ಈ ಭಾದೆಯನ್ನು ತಾಳಲಾರೆ ಅಮ್ಮಾ ಜೀವಂತ ಉಳಿಯಲಾರೆ.

**ಅರ್ಚನ** – ಸ್ವಾಮಿ ಹಾಗನ್ನಬೇಡಿ ನಿಮಗೆ ಕೆಮ್ಮು ಸಹ ಹೆಚ್ಚಾಗಿದೆ ಆದಕ್ಕಾಗಿ ನಿಮಗೆ ತೊಂದರೆಯಾಗುತ್ತದೆ ಸ್ವಲ್ಪ ನಿಧಾನಿಸಿ ನಾನೇ ಡಾಕ್ಟರನ್ನು ಕರೆದುಕೊಂಡು ಬರುತ್ತೇನೆ.

**ಸೂರ್ಯಚಂದ್ರ** – [ಜೋರಾಗಿ ಕೆಮ್ಮುತ್ತ]. ನಿಲ್ಲು ಅರ್ಚನಾ ನನ್ನನ್ನು ಹೊರಗೆ ಕರೆದುಕೊಂಡು ಹೋಗು ನನಗೆ ವಾಂತಿ ಬರುತ್ತದೆ.

**ಅರ್ಚನ** – ಬೇಡ ಸ್ವಾಮಿ ನೀವು ಈ ಸ್ಥಿತಿಯಲ್ಲಿ ಮೇಲೆ ಏಳಬೇಡಿ ಇಲ್ಲಿಯೇ ವಾಂತಿ ಮಾಡಿಕೊಳ್ಳಿ.

**ಸೂರ್ಯಚಂದ್ರ** – ಬೇಡ ಆರ್ಚನಾ ನಾನೇನು ಚಿಕ್ಕ ಮಗುವಲ್ಲ ಇಲ್ಲಿಯೇ ವಾಂತಿ ಮಾಡುವುದಕ್ಕೆ.

**ಅರ್ಚನ** – ನೋಡಿ ಸ್ವಾಮಿ ಯಾವ ಸತಿಯೇ ಆಗಲಿ ಪತಿಯು ವಿಪತ್ತಿನಲ್ಲಿದ್ದಾಗ ಅವರನ್ನು ಸಂರಕ್ಷಣೆ ಮಾಡುವುದು ಸತಿಯ ಧರ್ಮ ಇದನ್ನು ಅರಿಯದೇ ಅವಳು ನಡೆದರೆ ಅವಳು ಒಂದು ಹೆಣ್ಣೆ!

**ಸೂರ್ಯಚಂದ್ರ** – [ಕೆಮ್ಮುತ್ತಾ] ಅರ್ಚನಾ ಏನಾದರೂ ತೆಗೆದು ಕೊಂಡು ಬಾರೆ ವಾಂತಿಯು ಬರಹತ್ತಿದೆ.

**ಅರ್ಚನ** – [ಸೂರ್ಯನ ಕೈಹಿಡಿದು] ಸ್ವಾಮಿ ನನ್ನ ಹುಡಿಯಲ್ಲಿಯೇ ವಾಂತಿ ಮಾಡಿಕೊಳ್ಳಿ. [ಕೈಯನ್ನು ಮುಂದೆ ಒಡ್ಡುವಳು. ಅಷ್ಟರಲ್ಲಿ ವಿಶ್ವಚಂದ್ರ ಬರುವನು]

**ವಿಶ್ವಚಂದ್ರ** – [ಸ್ವಾಗತ] ಹೇಗಿದೆ ನೋಡಿ ನನ್ನ ಕಾರಸ್ಥಾನ. [ಪ್ರಕಾಶ] ಏನು ಸೂರ್ಯಚಂದ್ರ ಕಾರಿನ ಅಪಘಾತಕ್ಕೆ ಸಿಕ್ಕ ನಿನ್ನ ಕಾಲುಗಳು ಹೇಗಿವೆ? [ಅಷ್ಟರಲ್ಲಿ ಅರ್ಚನ ಒಳಗೆ ಹೋಗುವಳು]

**ಸೂರ್ಯಚಂದ್ರ** – ಬಾ ಮಿತ್ರ ನಾನು ಬದುಕುತ್ತೀನಿ ಎಂಬ ನಂಬಿಕೆ ನನಗಿಲ್ಲದಾಗಿದೆ.

**ವಿಶ್ವಚಂದ್ರ** – ಅಯ್ಯೋ ಪಾಪ ಹೀಗೆ ಆಗಬಾರದಾಗಿತ್ತು. ಮಿತ್ರ ನಾನಿರುವತನಕ ನೀನಾವುದನ್ನು ಚಿಂತೆ ಮಾಡಬೇಡ. ನಿನ್ನ ಯೋಗಕ್ಷೇಮ ಕ್ಕಾಗಿ ನಾನು ಪಣ ತೊಟ್ಟು ನಿಲ್ಲುತ್ತೇನೆ. ಇಂತಹ ಘಟನೆಗಳು ಮಾನವನಿಗೆ ಬರುವುದು ಸಹಜ. ಹೀಗೇಕೆ ನೀನು ವ್ಯಥೆ ಪಡುವೆ.

**ಸೂರ್ಯಚಂದ್ರ** – ಮಿತ್ರ ನನಗಾವುದು ತಿಳಿಯದಾಗಿದೆ. ನೀರು ನೀರು ನೀರು....

**ವಿಶ್ವಚಂದ್ರ** – ನೀರಿನ ದಾಹ ಹೆಚ್ಚಾದಂತೆ ಕಾಣುತ್ತದೆ. ತಂಗಿ, ತಂಗಿ ಅರ್ಚನಾ ನೀರು ತೆಗೆದುಕೊಂಡು ಬಾರಮ್ಮ [ಒಳಗಿನಿಂದ ಅರ್ಚನ ನೀರು ತರುವಳು]

**ಅರ್ಚನ** – ತೆಗೆದುಕೊಳ್ಳಿ ಸ್ವಾಮಿ [ನೀರು ಕುಡಿಸುವಳು]

**ಸೂರ್ಯಚಂದ್ರ** – ಅರ್ಚನಾ ಸ್ವಲ್ಪ ಕಾಫಿಯನ್ನಾದರೂ ಮಾಡು ಹೋಗು ವಿಶ್ವಚಂದ್ರ ಬಂದಿದ್ದಾನೆ.

**ಅರ್ಚನ** – ಹಾಗೆ ಆಗಲಿ ಸ್ವಾಮಿ. ಅಣ್ಣ ಇವರ ಬಳಿಯಲ್ಲಿಯೇ ಕುಳಿತುಕೋ ?

**ವಿಶ್ವಚಂದ್ರ** – ನಾನೆಲ್ಲ ನೋಡಿಕೊಳ್ಳುತ್ತೇನೆ.
[ಅರ್ಜನ ಒಳಗೆ ಹೋಗುವಳು]

**ಸೂರ್ಯಚಂದ್ರ** – ಮತ್ತೆ! ವಿಶ್ವ ರವಿಯು ಇನ್ನು ಮೈಸೂರಿನಿಂದ ಬರಲಿಲ್ಲವೇ. ರವಿಯು ಊರಲ್ಲಿ ಇದ್ದಿದ್ದರೆ ನನ್ನ ಉಪಚಾರವನ್ನು ಚನ್ನಾಗಿ ನೋಡುತ್ತಿದ್ದ.

**ವಿಶ್ವಚಂದ್ರ** – ರವಿಯು ನಾಳೆ ಬರುತ್ತೇನೆಂದು ಪತ್ರ ಹಾಕಿದ್ದಾನೆ. ನೀನು ತಾಳ್ಮೆಯಿಂದ ಇರು ನಮ್ಮ ಆಸ್ಪತ್ರೆಯಲ್ಲಿಯೇ ನಿನ್ನನ್ನು ಉಪಚಾರ ಮಾಡಲು ಎಲ್ಲಾ ವ್ಯವಸ್ಥೆಯನ್ನು ಮಾಡಿದ್ದೇವೆ.

**ಸೂರ್ಯಚಂದ್ರ** – ಹೌದು ಸ್ನೇಹಿತರಿದ್ದರೆ ನಿನ್ನಂತ ಸ್ನೆಹಿತರಿರಬೇಕು. ನನ್ನ 2 ಕಾಲು ಬಂದರೆ ಸಾಕು ಮತ್ತೆ ನನಗೆ ಹೊಸ ಚೇತನವೇ ಬಂದಂತೆ ಆಗುತ್ತದೆ.

**ವಿಶ್ವಚಂದ್ರ** – ಬರುತ್ತದೆ. ಬರುತ್ತದ ನಿನಗೆ ಹೊಸ ಚೇತನ ಬರಲೆಂದೆ ನಿನ್ನನ್ನು ಹೊತ್ತು ಹೊಯ್ಯಲು ನಮ್ಮ ಸೇವಕರು ಸಿದ್ಧರಾಗಿದ್ದಾರೆ.

**ಸೂರ್ಯಚಂದ್ರ** – ಇದೇನು ವಿಶ್ವ ನೀನೇನು ಮಾತನಾಡುತ್ತಿರುವ?

**ವಿಶ್ವಚಂದ್ರ** – ಹು. ಇನ್ನು ಕೆಲವೇ ನಿಮಿಷದಲ್ಲಿ ನಿನ್ನ ಉಪಚಾರ ವನ್ನು ಚೆನ್ನಾಗಿ ಮಾಡಿಸುತ್ತೇನೆ. [ಚಪ್ಪಾಳಿ ತಟ್ಟುತ್ತಾನೆ ಪ್ರತಾಪ್‌ಸಿಂಗ್ ಧರೋಡೆಸಿಂಗ್ ಬರುವರು] ನಾನು ಹೇಳಿದಂತೆ ಎಲ್ಲಾ ವ್ಯವಸ್ಥೆಯನ್ನು ಸರಿಮಾಡಿದ್ದೀರಾ ?

**ಪ್ರತಾಪ್‌ಸಿಂಗ್** – ನೀವು ಹೇಳಿದ ಮೇಲೆ ಮುಗಿದ ಹೋಯಿತು. ನಾವು ಯಾರನ್ನು ಉಳಿಸುವುದಿಲ್ಲ. ನಾವಿರುವುದೇ ನಿಮಗಾಗಿ.

**ವಿಶ್ವಚಂದ್ರ** – ಸರಿ ತಡಮಾಡದೆ ಇವನ ಬಾಯಿಗೆ ಬಟ್ಟೆ ತುರುಕಿ ಹೊತ್ತು ಹೊಯ್ಯಿರಿ.

ಇಬ್ಬರು – ಹಾಗೆ ಮಾಡಿ. [ಬಾಯಲ್ಲಿ ಬಟ್ಟೆ ತುರುಕಲು ಹೋಗುವರು]

ಸೂರ್ಯಚಂದ್ರ – ಮೋಸ! ಇದು ಮೋಸ! ಅರ್ಚನಾ! ಅರ್ಚನಾ! [ಕೂಗುವನು] [ಅರ್ಚನಾ ಒಳಗಿನಿಂದ ಬರುವಳು]

ವಿಶ್ವಚಂದ್ರ – ಇದು ಮೋಸವಲ್ಲ ಅರ್ಚನಳನ್ನು ನನ್ನ ವಶ ಮಾಡಿ ಕೊಳ್ಳಲು ಸಾಧನ.

ಅರ್ಚನ – ಥೂ ನೀಚ ಸ್ನೇಹಿತನಂತೆ ಪ್ರೀತಿಯ ನಟನೆ ಮಾಡಿ ತನ್ನ ಮನದ ಆಸೆಯನ್ನು ಈಡೇರಿಸಿಕೊಳ್ಳಲು ಸಂಚು ಹಾಕಿದ ಕತ್ತೆ. ಮೊದಲು ಹೊರಟುಹೋಗು ಇಲ್ಲಿಂದ. ಎಲ್ಲಿವ್ಸೋ ನೀಚರೆ ಕೈಬಿಡಿರಿ ನನ್ನ ಪತಿಯನ್ನು [ಬಿಡಿಸಲು ಹೋದಾಗ ವಿಶ್ವಚಂದ್ರ ಅವಳ ಕೈ ಹಿಡಿಯುವನು]

ವಿಶ್ವಚಂದ್ರ – ಮೊದಲು ಹೊತ್ತುಕೊಂಡು ನಡಿಯಿರಿ. ಇವಳದೇನು ನಮಗೆ ಭಯ ಏನು ನೋಡುವಿರಿ. ಮೊದಲು ತೆಗೆದುಕೊಂಡು ಹೋಗಿರಿ ಮಕ್ಕಳನ್ನು ಕೊಲೆ ಮಾಡಿದಂತೆ ಇವನನ್ನು [ನಗುವನು] [ಪ್ರತಾಪಸಿಂಗ್ ಧರೋದೆಸಿಂಗ್ ಸೂರ್ಯಚಂದ್ರನನ್ನು ಹೊತ್ತುಕೊಂಡು ಹೋಗುವರು]

ಅರ್ಚನ – ಸ್ವಾಮಿ, ಸ್ವಾಮಿ [ಎಂದು ಚೀರುವಳು]

ವಿಶ್ವಚಂದ್ರ – ಏ ಅರ್ಚನಾ ಏಕೆ ಹಾಗೆ ಚೀರುವೆ. ಇನ್ನೆಲ್ಲಿ ನಿನ್ನ ಸ್ವಾಮಿ. ಕೆಲವೇ ನಿಮಿಷದಲ್ಲಿ ಯಮಲೋಕದಲ್ಲಿ.

ಅರ್ಚನ – ಕೈ ಬಿಡು ಹಂದಿ ಜಾತಿಯವನೇ ಒಂದು ಹೆಣ್ಣಿನ ವ್ಯಾಮೋಹಕ್ಕಾಗಿ ಎಂತಹ ಹೇಯವಾದ ಕಾರ್ಯ ಮಾಡುತ್ತಿರುವೆಯಲ್ಲ ಮೊದಲು ಕೈಬಿಡು ನನ್ನನ್ನು.

ವಿಶ್ವಚಂದ್ರ – [ನಗುವನು] ಅರ್ಚನಾ ನೀನು ಎಷ್ಟು ಕೂಗಿದರೂ ನಿನ್ನ ಕೂಗನ್ನು ಕೇಳಿ ಬಂದು ಬಿಡಿಸುವಂತ ಸಾಮರ್ಥ್ಯವುಳ್ಳವರು ಇಲ್ಲಿ ಯಾರೂ ಇಲ್ಲ ಸುಮ್ಮನೆ ಒಪ್ಪಿಕೊಂಡು ನಿನ್ನ ಮೈಸುಖ ನೀಡೆನಗೆ,

**ಅರ್ಚನ** – ವಿಶ್ವಚಂದ್ರ ವಿನಾಕಾರಣ ನನ್ನನ್ನು ಕೆಣಕಿ ಒಂದು ಹೆಣ್ಣಿನ ಶೀಲಭಂಗವನ್ನು ಮಾಡಬೇಡ ನಿನಗೆ ಕೈಜೋಡಿಸಿ ಕೇಳಿಕೊಳ್ಳುತ್ತೇನೆ

**ವಿಶ್ವಚಂದ್ರ** – [ ವ್ಯಂಗ್ಯ ನಗೆ ನಗುವನು ] ಅರ್ಚನಾ ಹೆಚ್ಚು ಹೊತ್ತು ಉಳಿಯಿಲ್ಲದ ಮಾತನಾಡಬೇಡ. ನಾಬಯಸಿದಂತೆ ನಿನ್ನ ದೇಹ ನನಗೆ ಕೊಟ್ಟು ನನ್ನ ಮನಸ್ಸನ್ನು ತೃಪ್ತಿಗೊಳಿಸು.

[ ಮೇಲೇರಿ ಹೋಗುವನು ]

**ಅರ್ಚನ** – ಥೂ ಕಾಮುಕ ದೂರ ನಿಂತು ಮಾತನಾಡು ನನ ಮೈಮೇಲೆ ಬಂದರೆ ತಪ್ಪದು ಕೇಡು ?

**ವಿಶ್ವಚಂದ್ರ** – ದೂರ ಸರಿಯದಿರು ಅರ್ಚನಾ ನನ್ನೆದಿರು ನಿನ್ನ ಹಟವನ್ನು ಸಾಧಿಸಬೇಡ. ಕೊಲೆ ಮಾಡಲು ಹೇಸದ ನಾನು ನಿನ್ನನ್ನು ಕೆಡಸದೇ ಬಿಡಲಾರೆ ಹೂ॥ ಕೇಡಿಗೆ ಈಡಾಗದೆ ಮೊದಲು ಸುಮ್ಮನೆ ಒಪ್ಪಿಕೊಂಡು ನನ್ನ ಆಶ್ರಯದಲ್ಲಿ ಬಾಳು ನಿನ್ನನ್ನು ಹೂವಿನ ಹಾಗೆ ನೋಡಿಕೊಳ್ಳುತ್ತೇನೆ.

**ಅರ್ಚನ** – ಬಾಯಿ ಮುಚ್ಚು ನೀಚಾತ್ಮ ನನ್ನನ್ನು ಹೂವಿನಂತೆ ನೋಡಿಕೊಳ್ಳುವೆಯೋ ಈ ಹೂವು ಇನ್ನೊಬ್ಬರ ಮುಡಿಗೇರಿ ಬಾಡಿದ ಕುಸುಮ ಇದು. ನೀನು ಇದಕ್ಕೆ ಆಶಿಸಬೇಡ. ಬಾಡಿದ ಕುಸುಮ ಮತ್ತೆ ಅರಳಬಹುದೆ ?

**ವಿಶ್ವಚಂದ್ರ – ಅರ್ಚನಾ!** ನನಗೆ ನಿನ್ನ ಉದಾಹರಣೆ ಬೇಕಾಗಿಲ್ಲ ನಿನ್ನ ಬುದ್ಧಿ ಮಾತು ಕೇಳಿ ಬಿಟ್ಟು ಹೋಗುವಂತ ಹೇಡಿಯು ನಾನಲ್ಲ ನನ್ನ ಕಪಟ ಕಾರಸ್ಥಾನ ಇದುವರೆಗೂ ಯಾರಿಗೂ ತಿಳಿದಿಲ್ಲ. ಮುಂದೆಯೂ ತಿಳಿಯುವುದಿಲ್ಲ. ಅಂತಹ ಸಾಮರ್ಥ್ಯ ಇದೆ ನನ್ನಲ್ಲಿ.

**ಅರ್ಚನ** – ನಿನ್ನ ಸಾಮರ್ಥ್ಯಕ್ಕೆ ಬೆದರಿ ಶೀಲವನ್ನು ಕಳೆದುಕೊಂಡು ಬಾಳುವಂತ ಹೆಣ್ಣು ನಾನಲ್ಲ. ನನ್ನ ಪ್ರಾಣ ಹೋದರೂ ಚಿಂತೆಯಿಲ್ಲ

ನಾನು ಇನ್ನೊಬ್ಬರ ದಾಸಿಯಾಗಲು ಸಾಧ್ಯವಿಲ್ಲ.

**ವಿಶ್ವಚಂದ್ರ** – ಹೋ! ಹೋ! ನೀನು ಮಹಾಗರತಿಯೇನು?

**ಅರ್ಚನ** – ಅಂದರೆ ನಾನು ನೀತಿಗೆಟ್ಟವಳು ಎಂದು ನಿನ್ನ ಕಲ್ಪನೆಯೆ?

**ವಿಶ್ವಚಂದ್ರ** – ಮತ್ತೇನು? ನೀನು ಮಹಾ ಮಾನವಂತಳೆ. ವೇಶ್ಯೆಯ ಜಾತಿಯಲ್ಲಿ ಹುಟ್ಟಿ ವ್ಯಭಿಚಾರಿಯಿಂದ ಬೆಳೆದ ಹೆಣ್ಣು ನೀನು. ನಿಮ್ಮಂತವರ ಮನೆಗೆ ಅನೇಕ ವಿತ ಪುರುಷರು ಬಂದು ಕಾಮದ ತೃಷೆಯನ್ನು ತೀರಿಸಿಕೊಂಡು ತಮ್ಮ ಮನ ಆನಂದ ಪಟ್ಟು ಹೋಗುವರಲ್ಲ. ನಿಮ್ಮಂತ ಹೆಣ್ಣುಗಳಿಗೆ ಗರತಿಯರೆಂದು ಕರೆಯಬೇಕೇ?

**ಅರ್ಚನ** – ನೀನಾಡುವ ಮಾತು ನಿಜವಿದೆ. ಆದರೆ ನಾವು ಗರತಿಯರು ಎಂದು ಹೇಳಿಕೊಳ್ಳುವುದಿಲ್ಲ. ನಾವು ಸೂಳೆಯರೇ. ಇದನ್ನೆಲ್ಲ ತಿಳಿದವರಾದ ನೀವು ನಮ್ಮಂತವರ ಮನೆಯ ಎಂಜಲ ತಟ್ಟೆಯನ್ನು ನೆಕ್ಕುತ್ತ ಬಿದ್ದು ಒದ್ದಾಡುತ್ತಿರುವಿರಲ್ಲ. ನಿಮ್ಮಂಥ ಭಂಡರಿಗೆ ಏನು ಹೇಳಬೇಕು.

**ವಿಶ್ವಚಂದ್ರ** – ಬಾಯಿ ಮುಚ್ಚು ರಕ್ಕಸಿ. ಸಿಕ್ಕ ಸಿಕ್ಕಂತೆ ಮಾತನಾಡಿ ನನ್ನನ್ನು ರೊಚ್ಚಿಗೆಬ್ಬಿಸಬೇಡ. ನನ್ನನ್ನು ಎದುರು ಹಾಕಿಕೊಂಡರೆ ನಿನ್ನ ಆಟ ಏನು ನಡೆಯಲಾರದು ನಿನ್ನ ಮುದ್ದು ಗಂಡನಿಗೆ ಕಾಲು ಹೋಗುವಂತೆ ಮಾಡಿದ್ದು ನಾನೇ. ನಿನ್ನ ಗಂಡನನ್ನು ಯಮಲೋಕಕ್ಕೆ ಕಳಿಸಿದವನು ನಾನೇ. ನೀನು ಒಳ್ಳೆಯ ಮಾತಿನಿಂದ ಒಪ್ಪಿದರೇ ಒಳಿತು ಇಲ್ಲದಿದ್ದರೆ ನೀನು ಕಾಣುವೆ ಯಮಲೋಕದ ದಾರಿ ಹುಂ ನಡೆ ಒಳಗೆ ತಡ ಮಾಡದೆ. [ ಕೈಹಿಡಿಯುವನು ]

**ಅರ್ಚನ** – ಕೈಬಿಡು ವಿಶ್ವಚಂದ್ರ, ನಾನು ಹೆಣವಾದರೂ ಚಿಂತೆಯಿಲ್ಲ ನಿನ್ನ ದಾಸಿಯಾಗಲಾರೆ,

**ವಿಶ್ವಚಂದ್ರ** – ನಾನು ಬಿಡಬೇಕಲ್ಲಾ [ ನಗುತ್ತಾ ಹಿಡಿದು ಎಳೆಯುವನು. ಅಷ್ಟರಲ್ಲಿ ಪ್ರತಾಪ್‌ಸಿಂಗ್ ಓಡಿಬರುವನು ]

**ಪ್ರತಾಪ್‌ಸಿಂಗ್** – ಸಾಹೇಬ್ರೆ ಸಾಹೇಬ್ರೆ ಘಾತವಾಯಿತು.

ವಿಶ್ವಚಂದ್ರ – ಏನು ಪ್ರತಾಪ್‌ಸಿಂಗ್ ಏನಾಯಿತು.

ಪ್ರತಾಪ್‌ಸಿಂಗ್ – ನೀವು ಹೇಳಿದಂತೆ ಸೂರ್ಯಚಂದ್ರನನ್ನು ಮುಗಿಸಿದ್ದೇವೆ. ಆದರೂ ಈ ವಿಷಯವಲ್ಲಿ ನಮಗೇಕೋ ಅನುಮಾನ ಬರಹತ್ತಿದೆ. ಮೊದಲು ನಾವು ಇಲ್ಲಿಂದ ಪಾರಾಗುವದೇ ವಳಿತು ಬನ್ನಿ ಹೋಗೋಣ.

ವಿಶ್ವಚಂದ್ರ – ಅರ್ಚನಾ ಇಲ್ಲಿಗೆ ಮುಗಿಯಿತೆಂದು ತಿಳಿಯಬೇಡ. ನಿನ್ನನ್ನು ಒಂದು ದಾರಿಗೆ ಹಚ್ಚಿದ ಮೇಲೆ ನನಗೆ ಸಮಾಧಾನವಾಗುತ್ತದೆ.

[ ವಿಶ್ವಚಂದ್ರ ಪ್ರತಾಪ್‌ಸಿಂಗ್ ಹೋಗೇವರು ]

ಅರ್ಚನ – ಅಯ್ಯೋ ಪರಮೇಶ್ವರ ಇಷ್ಟೆಲ್ಲ ಆಗಬೇಕೆಂದು ನನ್ನ ಹಣೆಬರಹದಲ್ಲಿ ಬರೆದಿರುವೆಯಾ. ಆಗಲಿ ನನ್ನ ಲಿಖಿತದಲ್ಲಿ ಏನಿದೆಯೋ ಅದೆಲ್ಲ ಆಗಲಿ. ಈಗ ಸಧ್ಯ ಪೋಲೀಸ್ ಸ್ಟೇಷನ್‌ಗೆ ಹೋದ ಮೇಲೆ ಮುಂದಿನ ವಿಚಾರ. [ ಅರ್ಚನ ಹೊರಗೆ ಹೋಗುವಳು ]

## ಪ್ರವೇಶ ೧೧ [ ರಸ್ತಾ ]

[ ದಲಾಲಿ ಧರ್ಮಣ್ಣ ಪೋಲೀಸ್ ಮಾತನಾಡುತ್ತ ಬರುವರು ]

ಧರ್ಮಣ್ಣ – ಅಲ್ಲರಿ ಸಾಹೇಬರೆ ಏನು ವದಿಯಣ ವದ್ದಿರಿ? ಅಲ್ಲರಿ ನನ್ನದೇನು ಅಂತಾ ದೊಡ್ಡ ಕೇಸು? ಸೂಳಿಯಾರ ಮನೆಗೆ ಹೋಗುವುದು ಅದೊಂದು ಅಪರಾಧ ಏನ್ರಿ?

ಪೋಲೀಸ್ – ಅಲ್ಲ ಧರ್ಮಣ್ಣ ಅಪರಾಧ ಅಂತ ಕೇಳತಿಯಲ್ಲ ಹಿಂದಿನಿಂದಲೂ ಸೂಳೆಯರನ್ನು ಬಿಡಬಾರದು ಎಂದು ಕಾನೂನು ಇದೆ. ಆ ಕಾನೂನು ಕಬರ ಇಲ್ಲದಂಗ ಸೂಳೆಯರನ್ನ ಬಿಡ್ತಾರಲ್ಲ ಅದು ಇರಲಿ

ನಿಮ್ಮಂತ ತಿಳಿದವರು ಆ ಜಾಗಕ್ಕೆ ಹೋಗುತಿರಲ್ಲ ನಿಮಗೆ ಏನು ಹೇಳಬೇಕ್ರಿ ನಾವು.

**ಧರ್ಮಣ್ಣ** – ಸಾಹೇಬ್ರೆ ನಾವಾಗಿ ಹೋಗಾದಿಲ್ಲರಿ. ಅವರು ಸೂಳಿಯರು ಆಗೆರಂತ ನಾವು ಹೋಗ್ತಿವಿ. ಮೊದಲು ನೀವು ಅವರ್ನ ಬಂದಬಸ್ತ್ ಮಾಡಬೇಕ್ರಪ್ಪ. ಸುಮ್ಮನ ನಮ್ಮನ್ನ ಹಿಡುಕೊಂಡು ಹೋಗಿ ಮೈ ಹಣ್ಣಾಗಂಗ ನಾದತೀರಿ.

**ಪೋಲೀಸ್** – ಏನು ಹೇಳೋದು ಧರ್ಮಣ್ಣ ನಿಮಗಾಗಿ ಸೂಳೆರು ಸೂಳೆಯರಿಗಾಗಿ ನೀವು ಇಂಗ ಇದ್ದ ಮೇಲೆ ಅದನ್ನ ತಪ್ಪಿಸೋದು ಯಾರ ಕೈಲೆ ಸಾಧ್ಯ ಹೈತಿ ಏಳು. ಅಂಗ ನಡಿತಾ ಇರೋದೇ ಇದ್ರ ನಿಮ್ಮಂತರು ಅಂಗ ಮಾಡ್ತಾ ಇರೋದು! ನಾವ್ರ ಹಿಡಕೊಂಡು ಹೋಗ್ತಾ ಇರೋದು.

**ಧರ್ಮಣ್ಣ** – ಸಾಹೇಬ್ರೆ ನನಗೆ ಅನಿಸುತ್ತೆ........ ಸೂಳೆಯರನ ಬಿಡೋದು.... ನಿಮಗೋಸ್ಕರ ಅಂತಾ.

**ಪೋಲೀಸ್** – ಯಾಕಲೇ ಧರ್ಮ ನಡಿಲ ಕೊಟ್ರೆ ಸಿಕ್ಕ ಸಿಕ್ಕಂಗ ಮಾತಾಡ್ತಿಯಾ.

**ಧರ್ಮಣ್ಣ** – ಛೆ ಛೆ ಸಿಟ್ಟಿಗೆ ಹೋಗಬ್ಯಾಡ್ರಿ ಸಾಹೇಬ್ರು. ಅವರು ಸೂಳೇರ ಆಗದಿದ್ರೆ ನಮ್ಮಂಥವರು ಅಲ್ಲಿಗೆ ಹೋಗದಿದ್ರೆ ನಿಮ್ಮ ಜೀವನ ಸಲೀಸಾಗಿ ನಡಿತಿತ್ತೇನ್ರಿ? ನೀವೇ ಹೇಳ್ರಿ.

**ಪೋಲೀಸ್** – ಏಲೆ ಧರ್ಮ ನಿಮ್ಮಂಥವರಿಂದಲೇ ನಾವು ಜೀವನ ಮಾಡ್ತೀವಿ ಅಂತ ತಿಳಿದಿಯೇನಲೇ ನಮಗ ತಿಂಗಳ 1800 ನೂರು ಸಂಬಳ ಬರತೈತಿ. ಅದನ್ನ ತಿಂದರೆ ಸಾಕು ನಾವು.

**ಧರ್ಮಣ್ಣ** – ಯಾಕ ಹೇಳ್ತಿರಿ ಬಿಡ್ರಿ ಸಾಹೇಬ್ರು. ನಿಮ್ಮ ಸಂಬಳ ಬರೋದರಾಗ ಬ್ರಾಂದಿ ಅಂಗಡಿಯಾಗ, ಸರಾಯಿ ಅಂಗಡಿಯಾಗ, ಮಟನ್ ಹೋಟಲಿನಾಗ, ಸಿಗರೇಟು ಅಂಗಡಿಯಾಗ ನೀವು ಮಾಡಿರುವ ಬಾಕಿಗೆ

ತಂಬಾಕ ಸಾಕಾಗುತ್ತೆ. ಇನ್ನು ನಿಮ್ಮ ಹೆಂಡ್ತಿ ಮಕ್ಕಳು ಸಾಕಕೆ ನಮ್ಮಂಥವರ ಕೇಸಿನಿಂದಲೇ,

**ಪೋಲೀಸ್** – ಎಲೆ ಮಗನೇ ಇನ್ನೊಂದು ಆರು ತಿಂಗಳು ಒಗಗೆ ಇದ್ರು ಬೇಸಿತ್ತು. ಏನೋ ಹೋಗಲಿ ಬಿಡು ಅಂತ ರೆಕ್‌ಮೆಂಡ್ ಮಾಡಿ ಬಿಡಿಸಿದಿನೆಲ್ಲಾ ಅದು ಮಾಡ್ತಿತಲ್ಲಾ ಮಗನ.

**ಧರ್ಮಣ್ಣ** – ಹೋಗ್ಲಿ ಬಿಡ್ರಿ ಯಾಕ ಸಿಟ್ಟಿಗೆ ಹೋಗ್ತಿರಿ ಇದ್ದದ್ದು ಇದ್ದಂಗ ಮಾತನಾಡಿದರೆ ಸಿದ್ದಪ್ಪಗ ಸಿಡ್ಲ ಬಡದಂಗ ಎಂಬ ಗಾದಿ ಮಾತು ಸುಳ್ಳು ಆಗತೈತಿ ಏನ್ರಿ ಹೋಗ್ಲಿ ಬಿಡ್ರಿ ಆ ಸುದ್ದಿ ನಮಗ್ಯಾಕ್ರಿ. ಆ ಅಂತು ನನ್ನ ಹೊರಗೆ ಬಿಡಿಸಿದ್ರೆಲ್ಲ ಅದೇ ನನ್ನ ಪುಣ್ಯ. ನೀವು ಏನು ಕೇತಿದ್ರು ಕೊಡಕ ತಯಾರ ಆದಿನ್ರಿ.

**ಪೋಲೀಸ್** – ನೋಡಪಾ ಧರ್ಮಣ್ಣ ನೀನು ಹೆಂಗೂ ದಲಾಲಿ ಮಾಡ್ತಿದಿ, ದನದೊಳಗೆ ನಿನಗ ಅನುಭವ ಇರತೈತಿ. ಚಲೋ ಹಿಂಡೋದು ನಮಗೆ ಒಂದು ಎಮ್ಮಿ ಕೊಡಿಸಿ ಬಿಡಪಾ. ಹಾ! ಮತ್ತೆ ಪುಗುಸೆಟ್ಟೆ ಅಲ್ಲಾ. ನಾನು ದುಡ್ಡು ಕೊಡ್ತೀನಿ. ಆದರೆ ಎಮ್ಮಿ ವಪ್ಪತ್ತಿಗೆ 4 ಸೇರು ಹಾಲು ಹಿಂಡುಬೇಕು.

**ಧರ್ಮಣ್ಣ** – ಯಾರು ಬೇಡಾಂತಾರ್ರಿ ಸಾಹೇಬ್ರ ನೀವು ನಮಗೆ ಉಪಕಾರ ಮಾಡಿರಿ ಅಂದ ಮೇಲೆ ನಾನು ಉಪಕಾರ ಮಾಡೋದು ಬೇಡ. ಅದು ನೀವೇನು ಪುಗುಸೆಟ್ಟೆ ಕೇಳ್ತಿರೇನು? ದುಡ್ಡು ಕೊಡ್ತಿರಿ, ಚಲೋ ಥಳಿ ಕೇಳ್ತಿರಿ. ನಾವು ಕೊಡಸಾಕ ಬಂದಿರದೇನು? ನಡ್ರಿ ಅಂಗಾರ ಸಥ್ಯ ಸಂತ್ಯಾಕ ಹೋಗೋಣ, ನಿಮಗ ಎಮ್ಮಿ ಕೊಡಿಸಿ ನಾನು ಮನಿಗೆ ಹೋಕಿನಿ.

**ಪೋಲೀಸ್** – ನಡಿಯಪ್ಪ ಹೋಗಾನು.

**ಧರ್ಮಣ್ಣ** – ತಡ್ರಿ ಸಾಹೇಬ್ರ.

**ಪೋಲೀಸ್** – ಮತ್ತೇನ ನೆನಿಸಿಕೊಂಡೆಪಾ. ನಿನಗೆ ಹಾಲು ಕುಡಿಯೊಂ ಹೊತ್ತಿಗೆ 16 ಬುದ್ಧಿ.

**ಧರ್ಮಣ್ಣ** – ಏನಿಲ್ಲರಿ ಕೈ ತರ್‍ರಿ ಇಲ್ಲಿ [ಧರ್ಮಣ್ಣ ಪೋಲೀಸ್ ಕೈ ಹಿಡಿದು ಕೈ ಮೇಲೆ ಟವಲ್ ಹಾಕಿ ಬೆರಳು ಹಿಸುಕುತ್ತಾ] ಎಷ್ಟರ ಬೇಕ್ರಿ ನಿಮಗೆ ಏಮಿ.

**ಪೋಲೀಸ್** – ಅಲ್ಲ ಧರ್ಮಣ್ಣ ಏನ್ ಕೈಯಿ ಹಿಚಕಾಕ ಸುರು ಮಾಡಿದೆಲ್ಲ ಅಂಗ. ಹಿಚಕಿದರ ನಮಗೆ ಎಂಗ ಗೊತ್ತಾಗಬೇಕು. ಬಾಯಿಲೆ ಹೇಳಿಬಿಡಪಾ.

**ಧರ್ಮಣ್ಣ** – ಛೀ ಛೀ ಸಾಹೇಬ್ರು ಇದು ನಮ್ಮ ಧರ್ಮದ ಗುಟ್ಟು. ಇದನ್ನ ಇದುವರಿಗೂ ಯಾರಿಗು ತಿಳಿಸಿಲ್ಲ. ನೀವು ನಮ್ಮವರು ಅಂತ ತಿಳುಸ್ತೀನಿ ಸ್ವಲ್ಪ ಕಲುತುಕೊಳ್ಳಿರಿ. ಮುಂದೆ ನಮ್ಮಂತವರ ಕೂಡ ಸಲೀಸ್ ದಲಾಲಿ ವ್ಯಾಪಾರ ಮಾಡಬಹುದು.

**ಪೋಲೀಸ್** – ಅಲ್ಲ ಧರ್ಮಣ್ಣ ಕೈ ಮುಟ್ಟಿ ವ್ಯಾಪಾರ ಮಾಡೋದು ಚಲೋ ಅಂತಿಯೇನು ?

**ಧರ್ಮಣ್ಣ** – ಇನ್ನು ಕೇಳ್ತಿರಲ್ಲರಿ, ಒಮ್ಮೆ ಕೈ ಮುಟ್ಟಿ ಹೊಡ್ತಾ ಹೊಡದಿವಿ ಅಂದ್ರು 6 ತಿಂಗಳು ಜೀವನ ಮಾಡಬಹುದು.

**ಪೋಲೀಸ್** – ಅಬಬ ಹಿಂಗ ಹೈತೇನು. ತೋರಿಸರ ತೋರಿಸು ಬಿಡುವಿದ್ದಾಗ ನಾವೂ ಮಾಡಿದರಾಯಿತು ಈ ಕೆಲಸಾನಾ.

**ಧರ್ಮಣ್ಣ** – ತೋರಿಸ್ತೀನಿ ಕೈ ತರ್‍ರಿ [ಧರ್ಮಣ್ಣ ಪೋಲೀಸನ ಕೈ ಹಿಡಿದು] ಸಾಹೇಬ್ರು ಈ ಐದು ಬೆರಳು ಹಿಡಿದರ 5000 ಅಂತ ಲೆಕ್ಕ ಇನ್ನು 4500 ಅಂದ್ರು ನಾಲ್ಕು ಬೆರಳು ಹಿಡಿದು ಹಿಂಗ ಬೊಗ್ಗಿಸಬೇಕು [ಪೋಲೀಸನ ಕೈ ಬಗ್ಗಿಸುವನು] ಇನ್ನು 2500 ಅಂದ್ರು ಎರಡು ಬೆರಳು ಹಿಡಿದು ಬಗ್ಗಿಸಬೇಕು ಇನ್ನ ದೊಡ್ಡ ಗಟ್ಟಿ ಅಂದ್ರು ಈ ಹೆಬ್ಬೆರಳನ್ನ ಹಿಡಿಬೇಕ್ರಿ ಇಷ್ಟು ಏತಿ ನೋಡ್ರಿ ಇದರ ಮಹತ್ವ.

**ಪೋಲೀಸ್** – ಅಬಬಾ ಬಾರಿ ಕೆಲಸ ಹೈತಿ ಬಿಡಪ ಇದರಾಗ.

**ಧರ್ಮಣ್ಣ** ಸಾಹೆಬ್ರು ಇಷ್ಟ ಅಲ್ಲರಿ ಇದರಾಗ ಇನ್ನೂ ಕಲಿಯೋದು

ಬಹಳ ಪೈತ್ರಿ. ನಿಮಗೆ ಅಲ್ಲೆ ಮನಿಯಾಗ ಕಲಸ್ತೀನಿ ನಡ್ರಿ. ಈಗ ಸಧ್ಯ ನಿಮಗೆ ಎಷ್ಮೆ ಕೊಡುಸ್ತೀನಿ ಬರ್‍ರಿ. ಯಾಕಂದ್ರ ನಾನು ಈಗ ಮನೆ ಬಿಟ್ಟು ಮೂರು ತಿಂಗಳಾಯಿತು. ನಮ್ಮ ತಂಗಿ ಕೆಂಪವ್ವ ಎಷ್ಟು ಕಳವರಿ– ಸುತ್ತಾಳೋ ಏನೋ ಮೊದಲು ಹೋಗೋಣ ಬರ್‍ರಿ.

[ ಅಷ್ಟರಲ್ಲಿ ಮಾಲೆ ಹಾಕಿಕೊಂಡು ಕೆಂಪಿ ದಾನ ಮದುಮಕ್ಕಳ ಉಡುಗೊರೆಯಲ್ಲಿ ಮುಸುಕು ಹಾಕಿಕೊಂಡು ಬರುವರು ]

**ದಾನ** – ನಮಸ್ಕಾರಪಾ ಧರ್ಮಣ್ಣ ಮಾವ.

[ ಧರ್ಮಣ್ಣ ಅವರಿಬ್ಬರನ್ನು ನೋಡಿ ಗಾಬರಿಯಿಂದ ]

**ಧರ್ಮಣ್ಣ** – ಅಯ್ಯಯ್ಯಪ್ಪಾ ನಾನೀಗ ಎಲ್ಲಿ ಅದೀನಿ.

**ದಾನ** – ಇಲ್ಲೆ ಅದಿಯಪ್ಪ ಮಾವ ಖಾಸಾ ಖಾಸಾ ನಿಮ್ಮ ತಂಗಿ ಅರ್ಧಾಂಗಿ ನಿನ್ನ ಅಳಿಯನೆದುರು.

**ಧರ್ಮಣ್ಣ** – ಅರ್ಥವಾಯಿತಲೇ ತಮ್ಮ ಹೆಚ್ಚು ಮಾತನಾಡಬೇಡ ಬಾಯಿ ಮುಚ್ಚಿಕೋ ನಾನು ಮನ್ಯಾಗ ಇಲ್ಲದಾಗ ಇಂತಹ ಬಧ್ಮಾಷ್ ಕೆಲಸ ಮಾಡಿಯಲ್ಲಾ! ಅಲ್ಲವಾ ತಂಗಿ ಕೆಂಪವ್ವ ನಿನಗಾದರೂ ತಿಳಿಬಾರದ.

**ಪೋಲೀಸ್** – ಹಿಂಗ್ಯಾಕ ಮಾತಾಡ್ತಿರಿ ಧರ್ಮಣ್ಣರೇ ಅವರು ಹೈಕ್ಲಾಸ್ ಮದುವೆ ಆಗಿ ಬಂದಾರಾ ಇದು ನಿಮಗ ಸಂತೋಷ ಅಲ್ಲೇನ್ರಿ.

**ಧರ್ಮಣ್ಣ** – ಆಗೆತ್ರಿ ಸಂತೋಷ ಈಗ ಸಂತೋಷ ಆಗಿಲ್ಲಅಂದ್ರೆ ಏನು ಮಾಡಂಗ ಐತ್ರಿ ಎಲ್ಲಾ ಕಥಿ ಮುಗಿಸಿಕೊಂಡೆ ಬಂದಾರ.

**ಪೋಲೀಸ್** – ಒಳ್ಳೆ ಕೆಲಸನಾ ಮಾಡಿಕೊಂಡು ಬಂದರ ಬಿಡ್ರಿ ನಿಮ್ಮಂಗ ಸಂದು ಬಂದು ನೋಡಿ ಸೂಳೆಯರ ಮನಿಗೆ ಹೋಗೋ ಕೆಲಸ ಏನು ಮಾಡಿಲ್ಲ ಇವರು.

**ಧರ್ಮಣ್ಣ** – ಸುಮ್ಮನೆ ಇರ್‍ರಿ ಸಾಹೇಬ್ರ.

[ ಸಾಹೇಬರಿಗೆ ಸನ್ನಿ ಮಾಡುವನು ]

**ದಾನ** – ಹೇ ಮಾವಾ ಸಾಹೇಬ್ರಿಗೆ ಸನ್ನಿ ಮಾಡ್ತಿಯಾ ನೀನು ಈಗ ಮೂರು ತಿಂಗಳು ಅಲ್ಲಿ ಇದ್ದು ಬಂದಿದಿ. ಇದು ಏನು ನಿಮ್ಮ ತಂಗಿಗೆ ಗೊತ್ತಿಲ್ಲಂತ ತಿಳಿದಿಯೇನು ನಿನ್ನ ಸುದ್ದಿನಾ ಎಲ್ಲಾ ಹೇಳೀನಿ ಧರ್ಮ - ಧರ್ಮಸ್ಥಳದಾಗ.

**ಧರ್ಮಣ್ಣ** – ಬಾಯಿ ಮುಚ್ಚಲೇ ದನದಂತಾ ದಾನ ಏನ ನಮ್ಮ ಹುಡುಗ ಅಂತ ಎಲ್ಲಾ ಹೇಳಿದ್ರು ಪಬ್ಲಿಕ್ ಮಾಡಿ ಇಟ್ಟಿ ಈ ನನಮಗ.

**ದಾನ** – ಅಷ್ಟೆ ಅಲ್ಲ ಮಾವ ನೀನು 3 ತಿಂಗಳು ಪೋಲೀಸ್‌ಸ್ಟೇಷನ್ ನಾಗ ಇರಂಗ ಮಾಡಿದ್ದು ನಾನೆ. ಈ ಸಾಹೇಬ್ರಿಗೆ ಹೇಳಿ ಆ ಮಾಳಿಗಿ ಮನಿ ಮಾರೆವ್ವನ ಮನಿ ಹತ್ರ ಜೀಪು ಕಳಿಸಿದ್ದು ನಾನೆ. ಈಗ ನಿಮ್ಮ ಕೆಂಪಿನಾ ಮದುವೆ ಮಾಡಿಕೊಂಡು ಬಂದಿದ್ದು ನಾನೆ. ಇದಕ್ಕ ಮುಂದೆ ಏನಂತಿ.

**ಧರ್ಮಣ್ಣ** – ಇನ್ನು ಏನು ಅನ್ನಲಪಾ ಅಳಿಯಾ ಈಗ ನೀನು ಮಾಡಿರೋದು ಒಂದು ರೀತಿ ಬೇಸಿ ಆತು ನೋಡು.

**ದಾನ** – ಯಾಕ ಮಾವ?

**ಧರ್ಮಣ್ಣ** – ಹಂಗಲ್ಲಪ್ಪ ಅಳಿಯ ದೇವರೆ ಈ ಕೆಂಪವ್ವ ನಾನು ಮದುವಿ ಮಾಡಬೇಕಂದರೆ ನನವು 10, 20 ಸಾವಿರ ಹೋಗುತಿದ್ದುವು ಒಂದು ಪೈಸಾನು ಹೋಗದಂಗ ನಮ್ಮ ತಂಗಿ ಮದುವೆ ಧರ್ಮಸ್ಥಳದಾಗ ಮುಗಿದೈತಲ್ಲಾ ಅದು ಒಂದು ನನ ಪುಣ್ಯನ.

**ಕೆಂಪಿ** – ಏಯಣ್ಣ ಮನಸಿನ್ಯಾಗ ಇಷ್ಟೆಲ್ಲಾ ಮಸಲತ್ತು ಇಟಂ-ಕೊಂಡು ನನ್ನ ಇಷ್ಟು ದಿನ ಮದುವೆ ಮಾಡದಂಗ ಬಿಟ್ಟಿದ್ದೇನು ನೀನು ಮನಿಗೆ ಬಾ ಉಪ್ಪಿನ ನೀರು ಕುಡುಸ್ತೀನಿ?

**ಧರ್ಮ** – ಕಂಡಿಸನ ಏನು ಮಾಡಿಯಂವ್ವ ಉಪ್ಪಿನ ನೀರು ಯಾಕಂದ್ರು ನನ್ನ ಪ್ರೀತಿ ತಂಗಿ ಅಂತ ತುಪ್ಪ ತಿನಿಸಿದೆ ನೋಡು ಅದಕ್ಕ ಕುಡುಸ್ತಿ ಉಪ್ಪಿನ ನೀರು.

**ದಾನ** – ಹೇ ಮಾವ ಇರಲಿ ಬಿಡು ನಿಮ್ಮ ತಂಗಿದು ಏನು ಹಚ್ಚಿಕೊಳ್ಳುತಿ. ಇಷ್ಟು ದಿನ ನಿಮ್ಮ ತಂಗಿಗೆ ಡಬ್ಬಿ ತುಪ್ಪಾ ತಿನ್ನಿಸಿದ್ದಿ ಇನ್ಮೇಲೆ ನಾನು ಎಂಥಾ ತುಪ್ಪಾ ತಿನ್ನಿಸ್ತೀನಿ ಗೊತ್ತೇನು.

**ಧರ್ಮಣ್ಣ** – ಎಂಥಾದ್ದು ತಿನ್ನಿಸ್ತಿಲೆಯಪ್ಪಾ

**ದಾನ** – ಎಮ್ಮಿ ಎಮ್ಮಿ ತುಪ್ಪಾ ತಿನಿಸ್ತೀನಿ ಬರ್ರಿ ಬರ್ರಿ ಹೋಗನು ಪೆಂಗು ಸಾಹೇಬ್ರು ಬಂದಾರ ನಮ್ಮ ಮದುವೆ ಆದ ಸಂತೋಷಕ್ಕೆ ನಿಮಗೆ ಬೂಂದೆ ಮಾಡ್ತಿವಿ ಬರ್ರಿ ಬರ್ರಿ ಸಾಹೇಬ್ರ ಹೋಗೋಣ.

**ಪೋಲೀಸ್** – ನಡಿಯಪ್ಪಾ ನಮಗಾ ಬೂಂದೆ ತಿಂದು ಬಹಳ ದಿವಸ ಆಯಿತು ಆನಂದವಾಗಿ ಹೊಡಿತೀವಿ ನಡ್ರಿ.

**ಕೆಂಪಿ** – ಏಯಣ್ಣ ಬಾರೋ ಏನು ನಿಂತೆಲ್ಲಾ.

**ಧರ್ಮಣ್ಣ** - [ ನಿಟ್ಟುಸಿರು ಬಿಡುತ್ತಾ ] ಹೂ ನಡಿಯಪ್ಪ ನಡಿ ಏನು ನಡಿಸುತಿಯೊ ನಡಿಸು ನಿಂದು ನಡಿತೈತಿ ನಡಿಸು, ನಂದು ನಡಿ ಅಂದ್ರಾ ಯಂಗ ನಡಿತೈತಿ.

**ದಾನ** - ಇರಲಿ ಬಾರೋ ಮಾವಾ ಇಷ್ಟ್ಯಾಕ ಅಳು ಮುಸುಡಿ ಮಾಡ್ತಿಯಾ ನಿನ್ನ ಸೈಜು ಒಂದು ನೋಡಿ ನಿನಗೊಂದು ಜತೆ ಮಾಡ್ತಿನಿ ಬಾ ಬಾ ಹೋಗೋಣ ಬಾ, [ ಮೂವರು ಹೋಗುವರು ]



## ಪ್ರವೇಶ ೧೨ [ಮನೆ ಪ್ಲಾಟ್]

[ ವಿಶ್ವಚಂದ್ರ ಕಾಂಚನ ಒಳಗಿನಿಂದ ಬರುವರು ]

**ಕಾಂಚನ** – ಅಲ್ಲ ವಿಶ್ವ ನಿಮ್ಮ ಅಣ್ಣ ಮೈಸೂರಿನಿಂದ ಇನ್ನು ಬರಲಿಲ್ಲವಲ್ಲ.

**ವಿಶ್ವಚಂದ್ರ** – ಇಂದು ಬರಬಹುದು, ಏಕೆಂದರೆ ಬರುತ್ತೇನೆಂದು ಟೆಲಿಗ್ರಾಂ ಸಹ ಕೊಟ್ಟಿದ್ದಾನೆ.

**ಕಾಂಚನ** – ವಿಶ್ವ ಮಕ್ಕಳ ಮೇಲೆ ಇಲ್ಲದ ಮಮತೆ ಅವನಮ. ನಮ್ಮಿಬ್ಬರಿಗಿಂತ ತನ್ನ ಮಕ್ಕಳಿಗೆ ಸಾಕಷ್ಟು ಬಟ್ಟೆಗಳನ್ನು ತಂದಿರುತ್ತಾನೆ ಅಷ್ಟೊಂದು ಪ್ರೀತಿ ಅವನದು ಬಂದ ತಕ್ಷಣ ಮಕ್ಕಳು ಎಲ್ಲಿ ಎಂದು ಕೇಳಿದರೆ ಏನು ಹೇಳಬೇಕು?

**ವಿಶ್ವಚಂದ್ರ** - ಉಪಾಯಗಳಿಗೇನು ಕೊರತೆಯಿಲ್ಲ ಈ ವಿಶ್ವಚಂದ್ರನಲ್ಲಿ ಎಂಥಹ ಅಪಾಯದಲ್ಲಿ ಸಿಲುಕಿದರೂ ಥಕ್ಕಿಸಿಕೊಳ್ಳುವಂಥ ಸಾಮರ್ಥ್ಯವೂ ಇದೆ. ಇಂತಹ ಸಣ್ಣ ಕೆಲಸಕ್ಕಾಗಿ ನೀನೇಕೆ ಭಯಪಡುವೆ.

**ಕಾಂಚನ** – [ ಮುಗುಳು ನಗೆ ನಕ್ಕು ] ವಿಶ್ವ ಎಂಥಹ ಧೈರ್ಯ ಶಾಲಿಗಳು ನೀವು ನನ್ನ ಹೊಟ್ಟೆಯುಲ್ಲಿ ಹುಟ್ಟಿದ ಮಕಳನ್ನು ಕೊಲೆಮಾಡಿಸಿದಿರಲ್ಲ ಇದು ನಿಮಗೆ ಸಣ್ಣ ಕೆಲಸವೇ ?

**ವಿಶ್ವಚಂದ್ರ** - ನೋಡು ಕಾಂಚನ 9 ತಿಂಗಳು ಹೊತ್ತು ಹೆತ್ತು ಪ್ರೀತಿಯಿಂದ ಬೆಳೆಸಿ ನೀನೇ ನಿನ್ನ ಕೈಯಾರೆ ಕೊಲೆ ಮಾಡಿಸಿದೆಯಲ್ಲಾ ಇದು ನಿನಗೆ ಸಣ್ಣ ಕೆಲಸವೇ ನಿಮ್ಮಂತ ಕಾಮುಕ ಕನ್ಯೆಯರು ಇರುವುದರಿಂದಲೇ ಇಂತಹ ಕೆಲಸಗಳು ಸಣ್ಣವಾಗಿಯೇ ಕಾಣುತ್ತವೆ. ಆ ವಿಚಾರ ಇರಲಿ ಮೊದಲು ಕಾಫಿ ತೆಗೆದುಕೊಂಡು ಬಾರೆ,

**ಕಾಂಚನ** - ಆಗಲಿ F D C ಸಾಹೇಬ್ರೆ ತರುತ್ತೇನೆ,

[ ಕಾಂಚನ ಒಳಗೆ ಹೋಗುವಳು ]

**ವಿಶ್ವಚಂದ್ರ** - ಇಂದು ರವಿಚಂದ್ರನ ಆಗಮನವಿದೆ. ಈ ಮನೆಗೆ ನಾನೆಂಥಹ ಭಾಗ್ಯಶಾಲಿ ರವಿ ಮನೆಯಲ್ಲಿ ಇಲ್ಲದಾಗ ನಾನೇ ಈ ಮನೆಗೆ ನಾನೇ ಒಡೆಯಾ. ಇಂದಿನ ಸಂಧರ್ಭವನ್ನು ನೋಡಿದರೆ ನಾನೇ ರವಿಚಂದ್ರ ಅವನೇ ವಿಶ್ವಚಂದ್ರ.

[ ಒಳಗಿನಿಂದ ಕಾಫಿ ತರುವಳು ]

**ಕಾಂಚನ** - ಮತ್ತಾವ ವಿಶ್ವಚಂದ್ರ ಇರುವರು ಈ ಮನೆಯಲ್ಲಿ.

**ವಿಶ್ವಚಂದ್ರ** - ನನ್ನನ್ನು ಬಿಟ್ಟು ಯಾರು ಇರುವರು ಈ ಮನೆಯಲ್ಲಿ ಮೊದಲು ಕಾಫಿ ತಾ.

[ ವಿಶ್ವಚಂದ್ರ ಕಾಫಿ ಕುಡಿಯುತ್ತಿರುವನು. ಕಾಂಚನ ಆಲೋಚನೆ ಮಾಡುತ್ತಿರುವಳು ಅಷ್ಟರಲ್ಲಿ ರವಿಚಂದ್ರ ಸೂಟ್‌ಕೇಸ್ ಹಿಡಿದುಕೊಂಡು ಬರುವನು ]

**ರವಿಚಂದ್ರ** – ಹಲೋ ವಿಶ್ವಚಂದ್ರ.

**ವಿಶ್ವಚಂದ್ರ** – ಹಲೋ ರವಿಚಂದ್ರ.

**ರವಿಚಂದ್ರ** – ಏನು ರಾಣಿ ಸಾಹೇಬ್ರು ಒಳ್ಳೆ ಕುಷಿಯಾಗಿ ಇರುವಿರಲ್ಲಾ. ನಿನ್ನ ಮೈದುನನಿಗೆ ಕಾಫಿ ಕುಡಿಸುತ್ತಾ [ಕಾಂಚನ ದುಃಖಿಸುವಳು] ಏಕೆ ಕಾಂಚನ ದುಃಖಿಸುತ್ತಾ ಇರುವಿಯಲ್ಲ? ಹೂ ಮಾತನಾಡೆ [ಕಾಂಚನ ಮತ್ತಷ್ಟು ದುಃಖಿಸುವಳು] ವಿಶ್ವ ಏನಿದು ಸಮಾಚಾರ? ಕಾಂಚನ ಹೀಗೇಗ ದುಃಖಿಸುವಳು ? [ ವಿಶ್ವಚಂದ್ರ ಮುಖ ತಿರುಗಿ ನಿಲ್ಲುವನು] ಹೂಂ ಮಾತನಾಡೋ ವಿಶ್ವ ನೀವಿಬ್ಬರು ಹೀಗೇಕೆ ನಿಂತುಕೊಂಡಿರುವಿರಿ ನನಗೆ ತಿಳಿಯದಾಗಿದೆ, ಹಾ ಅದು ಇರಲಿ ಕಾಂಚನ ಸುಧಾ-ಉಮಾಚಂದ್ರ ಎಲ್ಲಿ ? [ಕಾಂಚನ ಮತ್ತಷ್ಟು ದುಃಖಿಸುವಳು] ಕಾಂಚನ, ಕಾಂಚನಾ.... ನೀನು ಹೀಗೆ ದುಃಖಿಸುತ್ತಾ ನಿಂತರೆ ನಾನು ಏನೆಂದು ತಿಳಿದುಕೊಳ್ಳಬೇಕು. ಮೊದಲು ಸುಧಾ–ಉಮಾಚಂದ್ರ ಎಲ್ಲಿದ್ದಾರೆ ಬೇಗನೇ ಹೇಳು?

**ಕಾಂಚನ.**– ಸ್ವಾಮಿ.

**ರವಿಚಂದ್ರ** – ಹೂಂ ಬೇಗ ಹೇಳಿ.

**ವಿಶ್ವಚಂದ್ರ** – ರವಿ ಅದನ್ನು ನನಗೆ ಧೈರ್ಯವೇ ಸಾಲದಾಗಿದೆ.

**ರವಿಚಂದ್ರ** – ಹೇಳು ಏನಾಗಿದೆ ಹೇಳು?

**ವಿಶ್ವಚಂದ್ರ** – ಏನು ಹೇಳಲಿ ಮಿತ್ರ ಶಾಲೆಗೆ ಹೋದ ಸುಧಾ ಉಮಾಚಂದ್ರ ಕಾರಿನ ಅಪಘಾತಕ್ಕೆ ಸಿಕ್ಕು ಸತ್ತು ಹೋದರು ರವಿ.

**ರವಿಚಂದ್ರ** – [ ಚೀರುತ್ತಾ ] ವಿಶ್ವ!!!.... ಕಾಂಚನ ಇದೆಂಥ ಅನಾಹುತ ಈಡು ಮಾಡಿರುವಿಯಲ್ಲೆ ಮನೆಯಲ್ಲಿ ಕುಳಿತುಕೊಂಡು.

**ಕಾಂಚನ** – ಸ್ವಾಮಿ.

**ವಿಶ್ವಚಂದ್ರ** – ರವಿ ಶಾಲೆಗೆ ಹೋದ ಉಮಾ-ಸುಧಾ ಇವರನ್ನು ಶಾಲೆಯಿಂದ ಮನೆಗೆ ಕರೆದುಕೊಂಡು ಬರಲಿಕ್ಕೆ ನಾನೇ ಹೋಗಿದ್ದೆ. ಶಾಲೆ ಯಿಂದ ಕೈ ಹಿಡಿದುಕೊಂಡು ಬಂದೆ. ದಾರಿಯಲ್ಲಿ ಸೂರ್ಯಚಂದ್ರನಿಗೆ ಕಾರು ಆಕ್ಸಿಡೆಂಟ್ ಆಗಿತ್ತು. ಆ ಮಿತ್ರನನ್ನು ಮಾತನಾಡಿಸಲು ಅವನ ಬಳಿಗೆ ಹೋದೆ. ಮಕ್ಕಳಿಬ್ಬರನ್ನು ಅಲ್ಲಿಯೇ ಬಿಟ್ಟು ಹೋದೆ. ಮತ್ತಾವನೊ ಒಬ್ಬ ಮಧ್ಯಪಾನ ಮಾಡಿ ಕಾರಿನ ಬಾಯಿಗೆ ಬಲಿ ಕೊಟ್ಟು ಮಕ್ಕಳನ್ನು ಮಿತ್ರಾ ಆ ದೃಶ್ಯವನ್ನು ನೋಡಿದರೆ ನಾನು ಈ ಲೋಕದಲ್ಲಿಯೇ ಇರ ಬಾರದು ಎನಿಸಿದೆ. [ವಿಶ್ವ ದುಃಖಿಸುತ್ತಾ] ರವಿ! ಒಂದು ಕಡೆ ಸೂರ್ಯ ಚಂದ್ರನ ಅನಾಹುತ. ಇನ್ನೊಂದು ಕಡೆ ಉಮಾ-ಸುಧಾರ ಅನಾಹುತ. ಇದು ಒಂದು ವಿಚಿತ್ರ ನಾಟಕ!

**ರವಿಚಂದ್ರ** – [ದುಃಖಿಸುತ್ತಾ] ಹೂಂ ಕಾಂಚನ ನಾನು ಮೈಸೂರಿಗೆ ಹೋಗುವಾಗ ಈ ಮನೆ ನಂದನವಾಗಿತ್ತು. ಇಂದು ಸ್ಮಶಾನವಾಯಿತು.

**ಕಾಂಚನ** – ಸ್ವಾಮಿ.

**ರವಿಚಂದ್ರ** – ಅಂದು ಮಕ್ಕಳಿದ್ದರೆ ಮನೆ ಚಂದ ಎಂಬುವ ಮಾತು ನೀನೇ ಹೇಳುತ್ತಿರಲಿಲ್ಲವೆ? ಮಕ್ಕಳೇ ಹೋದ ಮೇಲೆ ನಾವೇಕೆ ಇರಬೇಕು

[ ಮುಗುಳು ನಗೆ ] ನಾನು ನೂರಾರು ಆಸೆಯನ್ನು ಇಟ್ಟುಕೊಂಡು ಬಂದೆ. ಮಕ್ಕಳಿಗಾಗಿ 10 ಜತೆ ಬಟ್ಟೆಗಳನ್ನು ತಂದೆ. ನನ್ನ ಹೆಂಡತಿಗೆ ಶೃಂಗಾರ ಮಾಡಿ ಸಂತೋಷವನ್ನು ಕಾಣಲೆಂದು ಬೆಲೆಯುಳ್ಳ ಸೀರೆಯನ್ನು ತಂದೆ. ನನ್ನ ತಮ್ಮ ವಿಶ್ವಚಂದ್ರ ಆನಂದದಿಂದ ಇರಲೆಂದು ಅವನು ಮನ ಬಯಸಿದಂತೆ ಸೂಟು ಬೂಟನ್ನು ತಂದೆ. ಇವೆಲ್ಲವೂ ನಿಷ್ಫಲವಾಯಿತು. [ ರವಿ ಸೂಟ್‌ಕೇಸನ್ನು ತೆಗೆದು ಬಟ್ಟೆಯನ್ನು ಕಿತ್ತು ಹಾಕುವನು ] ಇವೆಲ್ಲವು ಯಾರಿಗೆ ಬೇಕಾಗಿದೆ ಬಟ್ಟೆ. [ ಉಮಾ – ಸುಧಾ ಇವರ ಬಟ್ಟೆಯನ್ನು ಕೈಯಲ್ಲಿ ಹಿಡಿದು ಹುಚ್ಚನಂತೆ ನಗುತ್ತಾ ] ಉಮಾ–ಸುಧಾ ಎಲ್ಲಿರುವಿರಿ ನಿಮಗಾಗಿ ತಂದಿರುವೆನು ಎಲ್ಲಿರುವಿರಿ. ಎಲ್ಲಿರುವಿರಿ.

**ಕಾಂಚನ** – ಸ್ವಾಮಿ, ಏಕೆ ಹುಚ್ಚರಂತೆ ಮಾತನಾಡುತ್ತಿರುವಿರಿ. [ ರವಿಯನ್ನು ಹಿಡಿದುಕೊಂಡು ]

**ವಿಶ್ವಚಂದ್ರ** – ಅಣ್ಣಾ ಹೀಗೇಕೆ ಮಾಡುವಿಯಣ್ಣಾ. ನೀನೇ ಈ ರೀತಿ ಅಧೈರ್ಯ ತಾಳಿದರೆ ಹೇಗೆ ಅಣ್ಣ, ನಿಮ್ಮಿರ್ವರ ಪ್ರೀತಿ ವಾತ್ಸಲ್ಯ ಇದ್ದರೆ ಇಂತಹ ಹತ್ತು ಮಕ್ಕಳನ್ನು ಕಾಣಬಹುದು. ಇಷ್ಟಕ್ಕೆ ನೀನು ಹುಚ್ಚನಾದರೆ ಈ ಮನೆಯ ನಂದಾದೀಪವೇ ಹೋದಂತಾಗುತ್ತದೆ.

**ರವಿಚಂದ್ರ** – ದೀಪ ಆರಿದರೇನು ? ಮನೆ ಕಳಚಿ ಬಿದ್ದರೇನು? ನನ್ನ ಮನೆ ಇರುವುದು ಕಾಡಿನಲ್ಲಿ. ಈಗಾಗಲೇ ನನ್ನ ಮಕ್ಕಳು ನನ್ನ ಮನೆಯಲ್ಲಿ ಸೇರಿದ್ದಾರೆ. ಹಾ ನಾನೀಗ ಅಲ್ಲಿಗೆ ಹೋಗುತ್ತೇನೆ, ಮಕ್ಕಳು ನನ್ನ ದಾರಿಯನ್ನೆ ಕಾಯುತ್ತಿರುತ್ತಾರೆ. ನಾನು ಹೋಗಿ ಮಕ್ಕಳಿಗೆ ಉಡುಗೊರೆಯನ್ನು ತೊಡಿಸಿ ಶಾಲೆಗೆ ಕಳಿಸಬೇಕು. [ ಟೈಂ ನೋಡಿ ] ಹಾ. ಟೈಂ ಆಯಿತು. ನೀವು ಇದೇ ಮನೆಯಲ್ಲಿ ಇರಬೇಕು. [ ನಗೆಯಿಂದ ] ಇದು 3 ದಿವಸದ ಮನೆ. ಇದು ನಾನು ಕಟ್ಟಿಸಿದ ಮನೆ. ನಾನು ಕಟ್ಟಿಸಿದ ಮನೆಯಲ್ಲಿ ನೀವಿರಬೇಕು, ನನಗಾಗಿ ಆ ಶಿವನು ಮನೆಯನ್ನು ಕಟ್ಟಿಸಿದ್ದಾನೆ ಅದೇ ನನ್ನ ಮನೆ. ಅದೇ ನನ್ನ ಮನೆ. [ ಓಡಿ ಹೋಗುವನು ] [ಅಷ್ಟರಲ್ಲಿ ಕಾಂಚನ ಹಿಡಿದುಕೊಳ್ಳಲು ಹೋಗುವಳು]

**ಕಾಂಚನ** – ಸ್ವಾಮಿ! ಸ್ವಾಮಿ!!

[ವಿಶ್ವಚಂದ್ರ ಕಾಂಚನಳನ್ನು ಹಿಡಿದುಕೊಳ್ಳುವನು]

**ವಿಶ್ವಚಂದ್ರ** – ಕಾಂಚನ ಆ ಹುಚ್ಚನ ಹಿಂದೆ ನಾವು ಬೆನ್ನ ಹತ್ತಿದರೆ ನಮಗೂ ಹುಚ್ಚರೆನ್ನುತ್ತಾರೆ ಈ ಜನರೆಲ್ಲ.

**ಕಾಂಚನ** – [ಗಾಬರಿಯಿಂದ] ವಿಶ್ವಾ ಈಗೇನು ಮಾಡುವುದು.

**ವಿಶ್ವಚಂದ್ರ** – ಅಪಾಯ ಬಂದಾಗ ಉಪಾಯ ಹುಡುಕುವುದೇ ನನ್ನ ಕೆಲಸ ನನ್ನ ಹೆಸರೇ ವಿಶ್ವಚಂದ್ರ! ವಿಶ್ವದ ವಿರಾಟ ಸ್ವರೂಪವೇ ನಾನು!

**ಕಾಂಚನ** – ಮತ್ತಾವ ಉಪಾಯವನ್ನು ಹುಡುಕಿದಿರಿ. ಈ ಹುಚ್ಚನನ್ನು ನಿಚ್ಚಳನನ್ನಾಗಿ ಮಾಡುವುದಕ್ಕೆ.

**ವಿಶ್ವಚಂದ್ರ** – ಹುಚ್ಚು ಈ ಹುಚ್ಚನನ್ನು ನಿಚ್ಚಳನನ್ನಾಗಿ ಮಾಡಿದರೆ ನಾವು ನಿಶ್ಚಿಂತೆಯಿಂದ ಇರುವುದು ಸಾಧ್ಯವೇ ಇಲ್ಲ.

**ಕಾಂಚನ** – ಮತ್ತೇನು ಮಾಡಬೇಕೆಂದಿರುವಿರಿ.

**ವಿಶ್ವಚಂದ್ರ** – ನೋಡು ಕಾಂಚನ ನಾವಿಬ್ಬರೂ ಕೊನೆಯವರೆಗೆ ಸ್ವೇಚ್ಛೆಯಿಂದ ನಲಿದು ಕುಣಿದು ಸಂತೋಷ ಸಾಗರದಲ್ಲಿ ತೇಲಾಡಬೇಕೆಂದರೆ ಇವನನ್ನು ಕೊಲೆ ಮಾಡಬೇಕು.

**ಕಾಂಚನ** – [ ಆಶ್ಚರ್ಯದಿಂದ ] ವಿಶ್ವಾ! ಇದು ಒಂದು ಉಪಾಯವೇ ನಿನ್ನಲ್ಲಿರುವುದು. [ದುಃಖಿಸುತ್ತ] ವಿಶ್ವಾ ಇದು ನಿನ್ನ ತಪ್ಪಲ್ಲ. ಮಹಾ ತಪ್ಪುಗಾರಳು ನಾನು. ಕ್ಷಣ ಸುಖಕ್ಕಾಗಿ ಮಕ್ಕಳನ್ನು ಕಳೆದು–ಕೊಂಡೆ. ಈಗ ಗಂಡನನ್ನು ಕಳೆದುಕೊಂಡು ರಂಡೆಯಾಗುವ ದುರ್ಭಾಗ್ಯ ಬಂದೊದಗಿತಲ್ಲ. ಅಬ್ಬಾ! ನಾನೆಂತಹ ಭಾಗ್ಯವಂತಳು. ನನ್ನಂತಹ ಇನ್ನಾವ ನಾರಿಯರಿಗೂ ಬಂದಿರಲಿಕ್ಕಿಲ್ಲ. ನಡಿಯಲಿ ನನ್ನ ಭೋಗದಲ್ಲಿ ಏನಿದೆಯೋ ಅದು ಎಲ್ಲ ನಡೆದು ಹೋಗಲಿ. ವಿಶ್ವಾ ನಿನ್ನ ನಿರ್ಧಾರವೇ ನನ್ನ ನಿರ್ಧಾರ.

**ವಿಶ್ವಚಂದ್ರ** – ಕಾಂಚನ ಈ ಉಪಾಯ ನಾವು ಮಾಡದಿದ್ದರೆ ನಮಗೆ ಬಂದೊದಗುವುದು ಅಪಾಯ, ಹೂ. ನೀನು ಒಳಗಡೆ ನಡೆ. ನಾನು ಮಿತ್ರ ರವಿಚಂದ್ರನನ್ನು ಅಲ್ಲಲ್ಲ ನಿನ್ನ ಗಂಡನನ್ನು ಕೊಲೆ ಮಾಡಿಸಿ ಮನೆಗೆ ಬರುವೆ. ಆಗ ನಾವು ಮಧುಚಂದ್ರರಾಗಿ ಜೀವನ ಸಾಗಿಸೋಣ. ಹೂಂ ನಡೆ ಒಳಗೆ. [ಒಳಕ್ಕೆ ಹೋಗುವಳು]
[ ವಿಶ್ವಚಂದ್ರ ಹೊರಕ್ಕೆ ಹೋಗುವನು ]

## ಪ್ರವೇಶ. ೧೩ [ಜಂಗಲ್ ರಸ್ತಾ]

[ ರವಿ ಹುಚ್ಚನಾಗಿ ಚೀರುವನು ]

**ರವಿಚಂದ್ರ** – ಈ ಕಾಡಿನಲ್ಲಿ ನನ್ನ ಮನೆ ಎಲ್ಲಿದೆ. ನನ್ನ ಮಕ್ಕ-ಳಿಬ್ಬರು ಎಲ್ಲಿರುವರು ಎಷ್ಟು ಹುಡುಕಿದರೂ ನನ್ನ ಮನೆಯೇ ಸಿಗದಾಗಿದೆ ಹೌದು ಶಿವನ ಮನೆ ನಮಗೆ ಸಿಗಬೇಕಾದರೆ ಅದನ್ನು ಪಡೆದು ಬರಬೇಕು [ನಗೆಯಿಂದ] ನನ್ನ ಮಕ್ಕಳು ಎಂಥಾ ಭಾಗ್ಯ ಶಾಲಿಗಳು ಅವರಿಗೆ ಈಗಾಗಲೆ ಶಿವನ ಮನೆ ದೊರಕಿದೆ ನಾನು ಆ ಮನೆಗೆ ಹೋಗಬೇಕೆಂದರೆ ಆ ಶಿವನು ದಾರಿಯನ್ನು ತೋರಿಸುವಂತಿಲ್ಲ ಉಮಾ ಸುಧಾ ಆ ಮನೆಯಲ್ಲಿ ಎಷ್ಟು ಚೆನ್ನಾಗಿರಬಹುದು [ಸಿಟ್ಟಿನಿಂದ] ಎಲೇ ದೇವನೆಂಬ ಪಿಶಾಚಿಯೇ ನೀನು ಆ ಮನೆಗೆ ಕರೆದುಕೊಳ್ಳದಿದ್ದರೂ ಚಿಂತೆಯಿಲ್ಲ ನನ್ನ ಮಕ್ಕಳಿಗಾಗಿ ಈ ಉಡುಗೊರೆಯನ್ನು ತಂದಿದ್ದೇನೆ ಇವನ್ನು ಕೊಟ್ಟು ಬರಲಿಕ್ಕಾದರೂ ಅಪ್ಪಣೆ ಕೊಡು. [ಅರ್ಚನಾ ಎದುರಿಗೆ ಬರುವಳು]

**ಅರ್ಚನ** – ನಮಸ್ಕಾರ ಡಾಕ್ಟರಿಗೆ.

**ರವಿಚಂದ್ರ** – ನೀನು ಯಾರಮ್ಮ.

**ಅರ್ಚನ** – ನಾನು ನಿಮ್ಮ ಸ್ನೇಹಿತ ಸೂರ್ಯಚಂದ್ರರ ಮಗಳು ಅರ್ಚನ ಏಕೆ ಇಷ್ಟು ಬೇಗನೆ ಮರೆತು ಬಿಟ್ಟಿರೆ ನನ್ನನ್ನು.

**ರವಿಚಂದ್ರ** – [ಮುಗುಳು ನಗೆಯಿಂದ] ಹುಚ್ಚಿ ಆ ದೇವರೇ ನಮ್ಮನ್ನು ಮರೆತಿರುವಾಗ ಇನ್ನು ಮಾನವರು ಮಾನವರನ್ನು ಮರೆಯು ವುದು, ಅಸಾಧ್ಯವೇ.

**ಅರ್ಚನ** – ಏಕೆ ಡಾಕ್ಟರ್ ಹೀಗೇಕೆ ಮಾತನಾಡುವಿರಿ ಹುಚ್ಚರಂತೆ.

**ರವಿಚಂದ್ರ** – ನೋಡು ತಾಯಿ ಸತ್ಯವಾದ ಮಾತನ್ನೇ ನೀನು ನುಡಿದಿ ಮಮತೆಯಿಂದ ಬೆಳೆಸಿದ ಮಕ್ಕಳೇ ಹೋದ ಮೇಲೆ ನಾವು ನಿಶ್ಚಳ ವಾಗಿ ಬಾಳುವೆ ಸಾಗಿಸುವುದು ಹೇಗೆ?

**ಅರ್ಚನ** – ಇದು ಏನು ಡಾಕ್ಟರು ನೀವು ಹೇಳುವುದು,

**ರವಿಚಂದ್ರ** – ಇದೇನಮ್ಮ ಇಷ್ಟು ಆಶ್ಚರ್ಯವಾಗಿ ಕೇಳುತ್ತಿರುವಿ ನೀನು ಇದೇ ಊರಲ್ಲಿ ಇದ್ದುಕೊಂಡು ನನ್ನ ಮಕ್ಕಳು ಸ್ಮಶಾನ ಸೇರಿದ್ದು ಗೊತ್ತಿಲ್ಲವೇ,

**ಅರ್ಚನ** – [ಗಾಬರಿಯಿಂದ] ಡಾಕ್ಟರ್ ಸತ್ಯವಾಗಿಯೂ ಈ ವಿಷಯ ನನಗೆ ಗೊತ್ತಿಲ್ಲ ಡಾಕ್ಟರ್ ಈ ವಿಷಯವನ್ನು ನಾನು ಕೇಳಿದರೆ ನಿಮಗಿಂತಲೂ ಹುಚ್ಚಿಯಾಗಬೇಕಾಗುತ್ತದೆ.

**ರವಿಚಂದ್ರ** – ಏಕಮ್ಮ?

**ಅರ್ಚನ** – ಅದನ್ನು ಯಾವ ಬಾಯಿಂದ ಹೇಳಬೇಕು ಡಾಕ್ಟರ್ ನನ್ನ ಪತಿದೇವರು ಕಾರಿನ ಆಕ್ಸಿಡೆಂಟ್‌ನಲ್ಲಿ ಎರಡು ಕಾಲುಗಳನ್ನು ಕಳೆದು ಕೊಂಡರು. ಅವರ ಕಾಲುಗಳು ಬರುವಂತೆ ಮಾಡುವವರೆ ಹುಚ್ಚರಾದಾಗ ಇನ್ನು ನನ್ನ ಪತಿದೇವರು ಇದ್ದು ಸತ್ತಂತೆ.

**ರವಿಚಂದ್ರ** – ನೋಡಮ್ಮ ಈ ನರಕದಲ್ಲಿರುವುದಕ್ಕಿಂತ ಸಾಯುವುದು ಎಷ್ಟೋ ಮೇಲು.

**ಅರ್ಚನ** – [ಸ್ವಗತ] ನಾನು ಇವರಿಗೆ ಏನು ಹೇಳಿದರೂ ತಿಳಿಯು ವಂತಿಲ್ಲ ಆ ವಿಶ್ವಚಂದ್ರನ ಕಪಟ ನಾಟಕವನ್ನು ಇವರಿಗೆ ತಿಳಿಸಬೇಕು ಎಂದಿದ್ದೆ ನಾನು ಈಗ ತಿಳಿಸಿದರೆ ಅದನ್ನು ನಂಬುವಂತಿಲ್ಲ ಇವರು.

ರವಿಚಂದ್ರ – ಏನು ತಾಯಿ ನಾನು ಹುಚ್ಚನಾಗಿರುವೆನೆಂದು ಏನೇನೊ ಬಡಬಡಿಸುತ್ತಿರುವಿಯಲ್ಲಮ್ಮ ಹೋಗಮ್ಮ ಹೋಗು ಈ ಹುಚ್ಚನ ಸಂಗಡ ಹೆಚ್ಚು ಹೊತ್ತು ಮಾತನಾಡಬಾರದು ಹೋಗಮ್ಮ ಮೊದಲು ನಿನ್ನ ಮನೆಗೆ ಹೋಗು. ನನಗಾಗಿ ಆ ಶಿವನು ಮನೆಯನ್ನು ಕಟ್ಟಿಸಿದ್ದಾನೆ ನನ್ನ ಮನೆ ಇಲ್ಲೇ ಇದೆ ಈಗಾಗಲೇ ನನ್ನ ಮಕ್ಕಳಿಬ್ಬರು ಆ ಮನೆಯಲ್ಲಿ ಆಟವಾಡುತ್ತಿದ್ದಾರೆ. ನಾನು ಅಲ್ಲಿಗೆ ಹೋಗಲೇ ಬೇಕು. ಉಮಾ ಸುಧಾ ಬಂದೆ. [ಚೀರುತ್ತಾ ಹೋಗುವನು]

**ಅರ್ಚನ** – ನಾನೊಂದು ಬಗೆದರೆ ದೈವವೊಂದು ಬಗೆದಂತಾಯಿತು ನನ್ನ ಬಾಳು. ಬರಲಿ ಎಷ್ಟೇ ಕಷ್ಟ ಬರಲಿ ಆ ವಿಶ್ವಚಂದ್ರನ ಮೇಲೆ ಕೇಸು ಕೊಟ್ಟಿರುವೆನು. ಮುಂದೇನಾಗುವುದೊ ಆಗಲಿ ನನ್ನ ಪತಿ ದೇವರನ್ನು ಕೊಲೆ ಮಾಡಿರಿದಂತೆ ನಾನು ಆ ವಿಶ್ವಚಂದ್ರನನ್ನು ಕೊಲೆ ಮಾಡಿಸುವುದಕ್ಕೊ ಹೇಸುವುದಿಲ್ಲ. ನಮಗೆ ಸೂಳೆ ಸೂಳೆ ಎಂದು ಬೊಗಳುವುದೆಲ್ಲ ಈ ಸಮಾಜ ಬೊಗಳುವವರೆಲ್ಲರಿಗೂ ನಾನು ಗಂಡನಾಗಬೇಕು. ಸದ್ಯ ಪೋಲೀಸ್ ಸ್ಟೇಷನ್‌ಗೆ ಹೋಗುತ್ತೇನೆ. ಅದನ್ನು ನೋಡಿಕೊಂಡು ಮುಂದಿನ ವಿಚಾರ.

[ ಹೋಗುವಳು ]

[ ಅದೇ ಸೀನಿನಲ್ಲಿ ವಿಶ್ವಚಂದ್ರ ದರೋಡೆಕಾರರು ಬರುವರು ]

**ವಿಶ್ವಚಂದ್ರ** – ಪ್ರತಾಪ್‌ಸಿಂಗ್ ದರೋಡೆಸಿಂಗ್ ಈಗ ಹುಚ್ಚನಂತೆ ಹೋದನಲ್ಲ ಆ ರವಿಯನ್ನು ನೀವು ಕೊಲೆ ಮಾಡಬೇಕು. ಹೂಂ ತೆಗೆದು ಕೊಳ್ಳಿರಿ ಈ 20 ಸಾವಿರ ಇಷ್ಟೆ ಸಾಕೆ ಇನ್ನು ಬೇಕೆ.

**ಪ್ರತಾಪ್‌ಸಿಂಗ್** - ನಿಮ್ಮ ಹತ್ತಿರ ಯಾವಾಗಲೂ ಕಂಡಿಷನ್ ಮಾಡುವುದಿಲ್ಲ ಏಕೆಂದರೆ ನೀವು ನಮಗೆ ಪರಮೆಂಟ್ ಗಿರಾಕಿ ಆಗಿದ್ದೀರಿ.

**ವಿಶ್ವಚಂದ್ರ** – ಮೊದಲು ಹೋಗಿ ಇದೇ ಕಾಡಿನಲ್ಲಿಯೇ ಆವನನ್ನು ಕೊಲೆ ಮಾಡಿರಿ. ಮೊದಲು ಹೋಗಿರಿ.

**ಧರೋಡೆಸಿಂಗ್** – ಆಗಲಿ ನೀವು ಹೇಳಿದಂತೆ ಅವನನ್ನು ಮುಗಿಸಿ ಬರುತ್ತೇವೆ.

ವಿಶ್ವಚಂದ್ರ – ಮಾತು ಸಾಕು ಮೊದಲು ಹೊರಡಿರಿ. [ ವಿಶ್ವ ನಗುತ್ತಾ ಹೋಗುವನು ] ಪ್ರತಾಪ್‌ಸಿಂಗ್, ಬಲೋದೆಸಿಂಗ್ ಹೋಗುವರು.

## ಪ್ರವೇಶ ೧೪ [ ರಸ್ತಾ ]

[ ಪೋಲೀಸ್ ಧರ್ಮಣ್ಣಾ ಬರುವರು ]

ಧರ್ಮಣ್ಣಾ – ಹೆಂಗಿತ್ರಿ ಸಾಹೇಬ್ರ ಬೂಂದ್ಯ.

ಪೋಲೀಸ್ – ಹ್ಯಾಂಗಿತ್ತು ಅಂತ ಕೇಳ್ತಿಯಲ್ಲೊ ಧರ್ಮಣ್ಣಾ. ನಿಮ್ಮ ತಂಗಿ ಕೈಯಾಗಿಂದು ಬೂಂದಿ ತಿಂದು ತಕ್ಷಣ ನನಗೆ ಮೂರ್ಛೆ ಬಂದಂಗಾತು.

ಧರ್ಮಣ್ಣಾ – ನೀವ್ಯಾಕ ಅಷ್ಟು ಪರಿಣಾಮ ಮಾಡಿಕೊಂಡ್ರಿ ನಮ್ಮ ತಂಗಿ ಹಂಗ ಇದ್ದಿದ್ರೆ ನೀವು ಪರಿಣಾಮ ಮಾಡಿಕೊಂತಿದ್ರಿ ನಾ ನಿಮಗ ಕೊಟ್ಟು ಮದುವೆ ಮಾಡುತಿದ್ದೆ ಯಾಕಂದ್ರ ನಿಮ್ಮ ಪಗಾರ ಸರಿಗೆ ತಂದು ಹೆಂಡ್ತಿ ಕೈಯಾಗ ಕೊಡುತಿದ್ರಿ. ಏನು ಮಾಡ್ಲಿ ಸಾಹೇಬ್ರ ನಮ್ಮ ತಂಗಿ ಕೆಂಪವ್ವ ಆ ದಾಸನ ಕೈ ಹಿಡಿದು ಎಲ್ಲಾ ಕೆಡಿಸಿಬಿಟ್ಳು.

ಪೋಲೀಸ್ – ಈಗೇನಾಗ್ಯೆತ್ರಿ ಧರ್ಮಣ್ಣಾ ದಾಸನ ಮೇಲೆ ಪಾರ್ಟಿ ಟು, ಕೇಸು ಹಾಕಿ ಅವನು ತಿರಿಗಿ ಬರದಂಗ ಕಂಬಿ ಎಣಿಸಾಕ ಕಳಿಸ್ತೀನಿ.

ಧರ್ಮಣ್ಣಾ – ಹಂಗ ಮಾಡಾಕ ಬರತೈತೇನ್ರಿ.

ಪೋಲೀಸ್ – ಬರತೈತಿ ಅಂತ ಕೇಳತಿಯಲ್ಲೊ ನಮ್ಮ ಡಿಪಾರ್ಟ್‌ಮೆಂಟ್ ಇರುವುದೇ ನಮ್ಮ ಕೈಯಲ್ಲಿ ನಾವು ಇಲ್ಲಿ ಏನು ಪಾಸು ಮಾಡ್ತಿವಿ ಅದೇ ಅಲ್ಲಿ ನಡಿತೈತಿ.

**ಧರ್ಮಣ್ಣ** – ಹಂಗಾರ ದಾಸನ್ನ ಕಂಬಿ ಎಣಿಸಾಕ ಕಳಿಸಿಬಿಡೋಣ ಅಂತೀರ ಸಾಹೇಬ್ರ. ಅವನ ಮೇಲೆ ನಂದು ಬಹಳ ಸಿಟ್ಟು ಐತ್ರಿ ನಿಮಗೆ ಗೊತ್ತೈತಲ್ರಿ ಆ ಮಾಳಿಗಿಮನಿ ಮಾಳಿತಾಗ ಹೋದಾಗ ನನ್ನ ಹಿಡಿಸಿ ಹೊಡಿಸಿದನಲ್ರೀ ಅದನ್ನ ನೆನಿಸಿಕೊಂಡು ಬಿಟ್ರೆ ಕಂಬಿ ಎಣಿಸಾಕ ಕಳಿಸೋದೆ ಪಾಡ ಅಂತೈತಿ ನನ್ನ ಮನಸು.

**ಪೋಲೀಸ್** – ನೀವು ರೆಡಿ ಅಂದ್ರೆ ನಾಳಿಗೇನೆ ಈ ಕೆಲಸ ಮಾಡ್ತಿನಿ.

**ಧರ್ಮಣ್ಣ** – [ಅತ್ತ ಇತ್ತ ನೋಡುತ್ತ] ಸಾಹೇಬ್ರ ನಾನು ರೆಡಿ ಅದೀನಿ. ನೀವು ಅವನ್ನ ಹಿಡಿಸಿ ಕಳಿಸಿದ ಮೇಲೆ ವಳ್ಳಿ ಊರು ಕಾಣಬಾರದು ನೋಡ್ರಿ ಆವನು ಸಾಯೋತನಕ ಕತ್ತಲ ಕೋಣೆಯಾಗ ಬಿದ್ದಿರಬೇಕು. ಅವನ ಸವಾದಿ ಸಹ ಅಲ್ಲೆ ಆಗಬೇಕು.

**ಪೋಲೀಸ್** – ಧರ್ಮಣ್ಣ ಹಂಗ ಮಾಡ್ತಿನಿ ಆದರೆ ನಾನು ಈ ಕೆಲಸ ಮಾಡಿದ ಮೇಲೆ ನಿನ್ನ ತಂಗಿ ಕೆಂಪಿನ ನನಗೊಪ್ಪಿಸಬೇಕು.

**ಧರ್ಮಣ್ಣ** – ಸಾಹೇಬ್ರ ನೀವು ಇಂತ ಪುಣ್ಯದ ಕೆಲಸ ಮಾಡ್ತಿರಿ ಅಂದ ಮೇಲೆ ನಮ್ಮ ತಂಗಿ ಕೆಂಪವ್ವನ್ನ ನಿಮಗೆ ವಪ್ಪಿಸದಿದ್ದರೆ ಆ ದೇವರಾದರೂ ಮೆಚ್ಚನೇನ್ರಿ.

**ಪೋಲೀಸ್** – ನೋಡು ಧರ್ಮಣ್ಣ ನಿಮ್ಮ ತಂಗಿ ಕೆಂಪಿನ ನನಗೆ ಒಪ್ಪಿಸಿಬಿಟ್ರೆ ನಂದು 20 ಎಕರಿ ಚಲೋ ಮಸಾರಿ ಭೂಮಿ ಐತಿ ಅದನ್ನ ಅವಳ ಹೆಸರಿಗೆ ಹಚ್ಚಿಬಿಡ್ತೀನಿ

**ಧರ್ಮಣ್ಣ** – ಹೌದು ಏನ್ರಿ ನಿಮಗ ಭೂಮಿ ಐತಿ ಏನ್ರಿ ನಾನು ಬರೇ ಪೋಲೀಸ್ ನೌಕರಿ ಅಂತ ಮಾಡಿದ್ದೆ ಅಲ್ರಿ ಸಾಹೇಬ್ರ ನಿಮ್ಮ ಭೂಮಿ ನೀರಾವರಿನಾ ಏನ ಬೆದ್ಲ.

**ಪೋಲೀಸ್** – ಧರ್ಮಣ್ಣ ನನ್ನ ಭೂಮಿ ಬೆದ್ಲ ಐತಿ, ನಿನ್ನ ತಂಗಿ ಕೆಂಪಿ ನನ್ನವಳಾಗಿಬಿಟ್ರೆ ಅದಕ್ಕೊಂದು 6 ಬೋರು ಹಾಕಿಸಿ ಸಬ್‌ಮರ್ಸಿಬಲ್ ಮೋಟರ್ ಕುಂದ್ರಿಸಿ ಹಗಲು ರಾತ್ರಿ ಪುರುಸತ್ತು ಇಲ್ಲದಂಗ ಮೋಟರ್

ಛಾಲು ಮಾಡ್ತಿನಿ ನನ್ನ ಮೋಟಾರು ನೀರು ಎತ್ತೋದು ನೀನು ನೋಡಿದ್ರ ನೀವು 3 ತಿಂಗಳು ಊರು ಬಿಡ್ತೀರಿ,

**ಧರ್ಮಣ್ಣ** – ಅಬಬಾಬಾ ಅಂಥಾ ಮೋಟರ್ ತರ್ತಿರಿ ಏನ್ರಿ ನೀವು ನೀವು ಅಂಥ ಮೋಟರ್ ತಂದ್ರ ನಾನು ಅಂಥಾ ಬೋರ್‌ಗಾಡಿ ತರಿಸಿ ಬೋರ್ ಹಾಕಸ್ತೀನಿ ನನ್ನ ಏಜನ್ಸಿಯೊಳಗ ಬೋರು ಹಾಕಿಸಿದೆ ಅಂದ್ರೆ ನಿಮ್ಮ ಮೋಟಾರು ಸಲೀಸಾಗಿ ಇಳಿಸಬಹುದು ಏರಿಸಬಹುದು.

**ಪೋಲೀಸ್** – ನೀವು ಬೋರ್ ಏಜೆಂಟ್ ಏನ್ರಿ.

**ಧರ್ಮಣ್ಣ** – ಅಯ್ಯೋ ನನ್ನ ಕಥೆ ಏನ ಕೇಳ್ತಿರಿ ನಾನು ಪೇಟಿಗೆ ಬಾರಸ್ತೀನಿ, ದಲಾಲಿ ಮಾಡ್ತಿನಿ, ಬೋರ್ ಹಾಕಿಸ್ತೀನಿ ನನ್ನ ಸರವಿಸ್‌ನಾಗ 152 ಬೋರ್ ಹಾಕಿನಿ ನಾನು ಹಾಕಸಿದ ಬೋರುಗಳಲ್ಲಿ 52 ಬೋರು ಗಳಲ್ಲಿ ಮಾತ್ರ ಮೋಟರು ಸಲೀಸಾಗಿ ಎಳಿತಾವು.

**ಪೋಲೀಸ್** – ಇನ್ನು 100 ಬೋರುಗಳು ಏನಾದವ್ರಿ ?

**ಧರ್ಮಣ್ಣ** – ಅವೆಲ್ಲವು ಗೋಣತಟ್ಟ ಹೊಟ್ಟಿಕೊಂಡು ಮಕ್ಕೊಂಡವು

**ಪೋಲೀಸ್** – ಹಂಗ್ಯಾಕ ಆದುವ್ರಿ ಅವು.

**ಧರ್ಮಣ್ಣ** – ನೋಡು ಸಾಹೇಬ್ರ ಈ ಬೋರು ಹಾಕಿಸಿಕೊಳ್ಳ-ವವರು ಒಬ್ಬೊಬ್ಬರು ಒಂದೊಂದು ತರ ಇರ್‍ತಾರ ನಾವು ಸಲೀಸಾಗಿ ಕೆಲಸ ಮಾಡಿಸಿ ಕೊಡ್ತಿವಿ ಅಂದ್ರ ನಮ್ಮನ್ನ ಒಬ್ಬರೂ ನಂಬಂಗಿಲ್ಲ.

**ಪೋಲೀಸ್** – ಅಲ್ರಿ ಧರ್ಮಣ್ಣೋರೆ ಬೋರು ಹಾಕದ್ರಾಗ ಹೆಚ್ಚು ಕಡಿಮೆ ಅದಾವ್ರ.

**ಧರ್ಮಣ್ಣ** – ಅದಾವ ಅಂತ ಕೇಳ್ತಿರಲ್ಲರೀ 28 ರೂಪಾಯಿಗೆ ಒಂದು ಅಡಿ ಹಾಕುವ ಬೋರ್ ಬೇರೆ 30 ರೂಪಾಯಿಗೆ ಹಾಕುವ್ವದು ಬೋರ್ ಬೇರೆ. ಇನ್ನು 35 ರೂಪಾಯಿಗೆ ಹಾಕುವ ಬೋರ್ ಬೇರೆ, ಬೋರು ಅಂದ್ರ ಒಂದೇ ನಮೂನಿ ಅದಾವ ಅಂತ ತಿಳುಕೊಂಡಿಯೇನು. ಯಾರ್‍ಯಾರು ಹೆಂಗೆಂಗ ರೊಕ್ಕ ಕೊಡತಾರ ಹಂಗಂಗ ಬೋರು ಹಾಕ್ತಾರ. ಈ ಬೋರು

ಗಾಡಿ ಮಾಲಿಕರು ಅದ್ರಾಗ ನಮ್ಮ ಚಳ್ಳಿಕೇರಿ ಅಂಜಿನಪ್ಪನವರು ಬೋರು ಹಾಕ್ತಾರ್ರಿ ಬ್ಯಾಪ್ಯಾಗ ಅವರು 50 ರೂಪಾಯಿ ಒಂದು ಅಡಿ ಅಂದ್ರು ಅವರಿಗೆ 500 ರೂಪಾಯಿ ಅಡ್ವಾನ್ಸ್ ಕಟ್ಟಿ ಅವರು ಕೊಟ್ಟಂತ ಡೇಟಿಗೆ ಹಾಕ್ಸಿಕೊಳ್ಳಾಕ ರೆಡಿ ಇರ್ತಾರ ಈ ಜನ.

**ಪೋಲೀಸ್** – ಅಬಬಬಾ ಅವರು ಬೋರು ಗಾಡಿಗೆ ಅಷ್ಟೊಂದು ಡಿಮ್ಯಾಂಡ್ ಹೈತ.

**ಧರ್ಮಣ್ಣ** – ಡಿಮಂಡ್ ಹೈತಿ ಅಂತ ಕೇಳ್ತಿರಲ್ರಿ ಆರಾರು ತಿಂಗಳು ಅವರ ಹಾಸಿಗೆ ತೊಗೊಂಡು ಅವರ ಆಫೀಸಿನ ಮುಂದೆ ಮಲಗಿರ ತ್ತಾರೆ ಈ ಬೋರು ಹಾಕಿಸಿಕೊಳ್ಳುವವರು,

**ಪೋಲೀಸ್** – ಅಷ್ಟೊಂದು ಚಲೋ ಹಾಕ್ತಾರಾ ಅವರು ಬೋರು.

**ಧರ್ಮಣ್ಣ** – ಚಲೋ ಹಾಕ್ತರ ಹಂತ ಕೇಳ್ತಿರಲ್ಲ ಅವರು ರೀ ಬೋರು ಮಾಡೋದೆ ಇಲ್ಲ ಅವರು ಒಂದು ಸಲ ಬೋರು ಮಾಡಿಹರೆ ಸಾಕು ಸಲಿಸಾಗಿ ಘೋಟರು ಇಳಿತಾವು.

**ಪೋಲೀಸ್** – ಹಂಗಾದ್ರ ಅವರ ಕೂಡನ ನಮ್ಮದಕ್ಕ ಬೋರು ಹಾಕಿಸಿಬಿಡ್ರಿ.

**ಧರ್ಮಣ್ಣ** – ಏ ನಾವು ಬ್ಯಾರೇರ ಕೂಡ ಹಾಕಿಸುವುದಿಲ್ಲ ಬಿಡ್ರಿ ಯಾಕಂದ್ರ ಆಂಜಿನಪ್ಪನವರಿಗೂ ನಮಗೂ ಬಹಳ ಸಲೀಸ್ ಹೈತಿ. ನಾವು ಯಾವುದೇ ಪಾಯಿಂಟಿಗೆ ಕಳುಹಿಸಿದರೂ ಸಲಿಸಾಗಿ ಮೋಟರು ಇಳಿಯುಂಗ ಮಾಡಿ ಬರತಾರ ಅವರು.

**ಪೋಲೀಸ್** – ಅಲ್ರಿ ಧರ್ಮಣ್ಣರ ಈ ತಮಿಳುನಾಡು ಗಾಡಿ ಬೇಸಿ ಅಂತ ಎಲ್ಲರು ಅಂತರಲ್ರಿ.

**ಧರ್ಮಣ್ಣ** – ಹೂ ಬೇಸೆಂತಾರ ಎಲ್ಲರು ಬೆಸೆಂತಾರ ಅವರ ಕೂಡ ನಾವು ಬೋರು ಮಾಡಿಸಿದರೆ ಎಲ್ಲರೂ ನಮ್ಮನ್ನ ಕೆಳಿತಾರ.

**ಪೋಲೀಸ್** – ಅಂಗಂತಿರಾ,

**ಧರ್ಮಣ್ಣ** – ಆ ತಮಿಳುನಾಡು ನನ್ನ ಮಕ್ಕಳು ಇನ್ನೂರು ಬೋರು ಗಾಡಿ ಮಾಡಿಕೊಂಡಾರ ದುಡ್ಡು ಮಾಡಕ ನಮ್ಮ ಕರ್ನಾಟಕಕ್ಕ ಬರ್ತಾರ

ಏಜನ್ಸಿ ಕೇಳಿದರ 36 ರೂಪಾಯಿ ರೇಟು ಅಂತಾರ. ಡೈರೆಕ್ಟ್ ಪಾರ್ಟಿ ಕೇಳಿದರ 28 ರೂಪಾಯಿ ರೇಟು ಅಂದು ಸೌಡು ಬಿಟ್ಟು ಹಾಕಿ ಹೊಡೆದು ಹೋಗ್ತಾರ. 28 ರೂಪಾಯಿ ಹಾಕಿಸಿಕೊಂಡ ರೈತರು ಇಂದಗಡಿಸರೆ ಬೊಬ್ಬೆ ಹೊಡಿತಾರ.

ಪೋಲೀಸ್ – ಧರ್ಮಣ್ಣಾರೆ ಇದುವರೆಗೂ ಮಾತಾಡಿದ್ದು ಎಲ್ಲಾ ಸುಳ್ಳೆ. ಇನ್ನು ನಿಮ್ಮ ತಂಗಿ ಎಲ್ಲೋ, ನನ್ನ ಭೂಮಿ ಎಲ್ಲೋ. ನಿಮ್ಮ ಬೋರು ಎಲ್ಲೋ. ಮೊದಲು ಆ ದಾನನ್ನ ಕತ್ತಲ ಕೋಣೆಗೆ ಕಳಿಸೊ ಪ್ರಯತ್ನ ಮಾಡೋಣ ಬರ್ರಿ,

ಧರ್ಮಣ್ಣ – ಅರ್ರಿ ಸಾಹೇಬ್ರ ನಾವು ಇದುವರಿಗೂ ಮಾತಾಡಿದ್ದು ಸುಳ್ಳು ಅಂದ್ರೆಲಾ ಮತ್ತ ನಾನು ಮಾತ್ರ ಮಾತಾಡಿದ್ದು ಕರೆ ಅಂತ ತಿಳ–ಕೊಂಡಿರೇನು. ಲೇ ಹಲ್ಕನನಮಗನ ಪೋಲೀಸ್‌ಸಾಹೇಬ ಏನ ಸಲೀಸಾಗಿ ಅವರ ಅಂತ ಹೇಳಿ ಸ್ವಲ್ಪ ಸದ್ದ ಕೊಟ್ಟು ಮಾತಾಡಿದರ ನಮ್ಮ ತಂಗಿನ ಕೇಳ್ತಿ ಏನಲೆ ಮಗನ. ಪಾಪ ಆ ದಾನ ಎಷ್ಟು ಕಷ್ಟ ಬಿದ್ದು ನಮ್ಮ ತಂಗಿ ಮದುವಿ ಮಾಡಿಕೊಂಡು ಆನಂದವಾಗಿ ಬಾಳೆವು ಮಾಡಕತ್ಯಾನ. ಈ ಮಗ ಕತ್ತಲ ಕೋಣೆಗೆ ಕಳಸ್ತಾನಂತ ನೋಡ್ರಿ.

ಪೋಲೀಸ್ – ಮತ್ತ ನೀವಾ ಹೇಳಿದ್ರಲ್ರಿ ಧರ್ಮಣ್ಣಾರೇ.

ಧರ್ಮಣ್ಣ – ಏ ಪೋಲೀಸಪ್ಪ ಇದೇ ಮಾತು ಬೇರೆ ಯಾರಾದೆರು ಕೇಳಿದ್ರೆ ಟೊಪ್ಪಿಗೆ ಬಾರಂಗ ಬಡಿತಿದ್ದೆ ನೋಡು. ನಡಿಯೋ ಹಲ್ಕ ನನ ಮಗನಾ. ನಿನಗ ಅಷ್ಟೊಕೊಂದು ಅವಸ್ರ ಇದ್ರೆ ಹೈದ್ರಾಬಾದ್‌ನಾಗ ಹಾದರಗೇರಿಗೆ ಕಳಸ್ತಿನಿಬಾ.

ಪೋಲೀಸ್ – ಛೀ ಛೀ ಧರ್ಮಣ್ಣಾರೇ ನೀವು ಇಷ್ಟೊಂದು ಸಿಟ್ಟಿಗೆ ಹೋಗಬೇಡ್ರಿ ನಾವು ಹೈದ್ರಾಬಾದಿಗೆ ಹೋಗೋದು ಬ್ಯಾಡ ಹಾದರಗೇರಿ ನೋಡೋದು ಬ್ಯಾಡ. ನಾವು ನಮ್ಮನಿಗೆ ಹೊಕ್ಕೇವಿ. ನೀವು ನಿಮ್ಮನಿಗೆ ಹೋಗ್ರಿ.

ಧರ್ಮಣ್ಣ – ಬರ್ರಿ ಬರ್ರಿ ಹೋಗೋನು ಬರ್ರಿ.

## ಪ್ರವೇಶ ೧೫ [ಜಂಗಲ್ ಸೀನ್]

[ಒಂದು ಗುಡಿಸಲು ಇರುತ್ತದೆ. ಆ ಗುಡಿಸಲಲ್ಲಿ ಉಮಾಚಂದ್ರ-ಸುಧಾ ಮತ್ತು ಪೋಲೀಸ್ ಇರುವರು. ಗುಡಿಸಲು ಬಾಗಿಲು ಮುಚ್ಚಿರುತ್ತದೆ. ಧರೋಡೆಸಿಂಗ್, ಪ್ರತಾಪ್‌ಸಿಂಗ್ ರವಿಚಂದ್ರನನ್ನು ಹಿಡಿದುಕೊಂಡು ಬರುವರು]

**ರವಿಚಂದ್ರ** – ಎಲ್ರೆಪಾ ನನ್ನ ಮಕ್ಕಳು? ನನ್ನ ಮಕ್ಕಳನ್ನ ತೋರಿಸುತ್ತೇನಂತ ಹೇಳಿ ನನ್ನನ್ನು ಎಲ್ಲೆಲ್ಲೊ ಕರೆದುಕೊಂಡು ಅಡ್ಡಾಡುತ್ತಿರುವಿರಲ್ಲಾ.

**ಧರೋಡೆಸಿಂಗ್** – ಏ ಹುಚ್ಚ! ಬಾಯಿ ಮುಚ್ಚಿಕೊಂಡು ಸುಮ್ನ ನಿಂತುಕೊ. ನೋಡಿದೇನು ಪ್ರತಾಪ್‌ಸಿಂಗ್.

**ಪ್ರತಾಪ್‌ಸಿಂಗ್** – [ನಗುತ್ತಾ] ಏ ಹುಚ್ಚ! ನಿನ್ನ ಮಕ್ಕಳು ಎಲ್ಲಿದ್ದರೋ? ಅವರನ್ನ ತುಂಡು ತುಂಡಾಗಿ ಕಡಿದು ಹೊಳೆಮಡೆಯಲ್ಲಿ ಹುಗಿದುಬಿಟ್ಟಿದ್ದೇವೆ.

**ರವಿಚಂದ್ರ** – ಇದೇನ್ರುಪಾ ನನ್ನಂತೆ ನಿಮಗೆ ಹುಚ್ಚು ಹಿಡಿಯಿತೇನ್ರುಪಾ?

**ಧರೋಡೆಸಿಂಗ್** – ಹಿಡಿದಿದೆ ಹಿಡಿದಿದೆ ಹುಚ್ಚು ಇನ್ನು ಕೆಲವೇ ನಿಮಿಷದಲ್ಲಿ ನಿನ್ನನ್ನು ನಿಚ್ಚಳನನ್ನಾಗಿ ಮಾಡುತ್ತೇವೆ ತಡಿ.

[ಅಷ್ಟರಲ್ಲಿ ಸಿಟ್ಟಿನಿಂದ ವಿಶ್ವಚಂದ್ರ ಕಾಂಚನ ಬರುವರು]

**ವಿಶ್ವಚಂದ್ರ** – ಏ ಧರೋಡೆಕೋರರೇ ಮತ್ತೇಕೆ ನನ್ನನ್ನು ಕರೆಸಿದಿರಿ ಇಲ್ಲಿಗೆ.

**ಪ್ರತಾಪ್‌ಸಿಂಗ್** – ನೋಡಿ ಸಾಹೇಬ್ರೆ ನಾವು ಯಾರನ್ನು ಕೊಲೆ ಮಾಡಿದರೂ ಅವರ ಆಸೆ ಏನಿದೆಯೋ ಅದನ್ನು ತೀರಿಸಿ ಕೊಲೆ ಮಾಡುತ್ತೀವಿ.

**ಕಾಂಚನ** – ಮತ್ತೆ ಈ ನೀಚನಿಗೆ ಏನು ಬೇಕಂತೆ.

**ಧರೋಡೆಸಿಂಗ್** – ಈ ಹುಚ್ಚನಿಗೆ ಮಕ್ಕಳನ್ನು ತೋರಿಸಬೇಕಂತೆ ಎಲ್ಲಿಂದ ತರಬೇಕು ನಾವು.

[ರವಿಚಂದ್ರ, ಉಮಾ–ಸುಧಾ ಎಂದು ಪದೇ ಪದೇ ಬಡಬಡಿಸುತ್ತಿರುವನು]

**ವಿಶ್ವಚಂದ್ರ** – ಏ ರವಿ! ಏಕ ಬಡಬಡಿಸುತ್ತಿರುವಿ. ಇನ್ನು ನಮ್ಮ ಕಥಿ ಗೊತ್ತಾಗಲಿಲ್ಲವೆ? ನಿನಗೆ. ಈಗಾಗಲೇ ನಿನ್ನ ಹೆಂಡತಿ ಕಾಂಚನ ಮತ್ತು ನಿನ್ನ ಪ್ರೀತಿಯ ಈ ಮುದ್ದು ತಮ್ಮನ ಹೃದಯಗಳೆರಡು ಬೆರತು ಹೋಗಿವೆ. ಅಷ್ಟೆ ಅಲ್ಲ ನಮ್ಮಿಬ್ಬರ ಪ್ರೀತಿ ಪ್ರೇಮಕ್ಕೆ ಅಡ್ಡಿ ಆದ ಉಮಾ–ಸುಧಾಳನ್ನು ನಾವೇ ಕೊಲೆ ಮಾಡಿಸಿರುವೆವು.

**ಕಾಂಚನ** – ಹೌದು ರವಿ ನಮ್ಮ ಪ್ರೀತಿಗೆ ಅಡ್ಡಿ ಆದವರನ್ನು ಯಾರನ್ನು ಉಳಿಸುವುದಿಲ್ಲ. ಈಗ ನಿನ್ನನ್ನು ಇಲ್ಲಿಗೆ ಕರೆದು ತಂದಿರುವುದು ಕೊಲೆ ಮಾಡಿಸುವುದಕ್ಕಾಗಿ.

**ರವಿಚಂದ್ರ** – [ಹುಚ್ಚನಾಗಿ ನಗುವನು] ಏನು! ನನ್ನ ಮಕ್ಕಳನ್ನು ಕೊಲೆ ಮಾಡಿಸಿದವರು ನೀವಾ? ಈಗ ನನ್ನನ್ನು ಕೊಲೆ ಮಾಡಿಸುತ್ತೀರಾ? ಮಾಡಿಸಿ ಮಾಡಿಸಿ ಇಂತಹ ನರಕದಲ್ಲಿ ಇರುವುದಕ್ಕಿಂತ ಸಾಯುವುದೇ ಮೇಲು! [ಪ್ರತಾಪ್‌ಸಿಂಗ್ ಧರೋಡೆಸಿಂಗರನ್ನು ನೋಡುತ್ತಾ] ನೀವೇಕೆ ಸುಮ್ಮ ನಿಂತಿರಪಾ ಮೊದಲು ನನ್ನನ್ನು ಮುಗಿಸಿಬಿಡಿರಿ. ಆದರೆ ನನ್ನ ಮಕ್ಕಳ ಫೋಟೋವನ್ನಾದರೂ ತಂದು ತೋರಿಸು ನನ್ನ ಆಸೆ ಈಡೇರಿಸಿ ನಿಮ್ಮ ಮನ ತೃಪ್ತಿ ಆಗುವಂತೆ ಕಡಿದು ಹಾಕಿರಪಾ!

**ಧರೋಡೆಸಿಂಗ್** – ಹೇ ಪ್ರತಾಪ್‌ಸಿಂಗ್! ಇವನ ಮಾತು ಏನು ಕೇಳುತ್ತಾ ನಿಂತಿರುವಿ! ಮೊದಲು ಮುಗಿಸಿ ಇವನನ್ನು ಹೂಂ.

[ಧರೋಡೆಸಿಂಗ್ ಮಚ್ಚು ಮೇಲಕ್ಕೆ ಎತ್ತುವನು]

**ರವಿಚಂದ್ರ** – ನಿಮಗೆ ಕಾಲಿಗೆ ಬಿದ್ದು ಕೇಳಿಕೊಳ್ಳುತ್ತಿನಪಾ. ನನ್ನ ಮಕ್ಕಳ ಫೋಟೋ ತಂದು ತೋರಿಸಿರಪಾ.

**ಪ್ರತಾಪ್‌ಸಿಂಗ್** – ಓ ಹೋ ನಿನಗೆ ಮಕ್ಕಳು ಬೇಕೆ ಮಕ್ಕಳು. ತಡೆ ತರುತ್ತೇವೆ. ಹೇ ಧರೋಡೆಸಿಂಗ್ ಇವರಾರನ್ನು ಒಂದು ಹೆಜ್ಜೆ ಮುಂದೆ ಬಿಡಬೇಡ. ಇವನಿಗೆ ಮಕ್ಕಳು ಬೇಕಂತೆ ತಂದು ತೋರಿಸೋಣ.

[ ಪ್ರತಾಪ್‌ಸಿಂಗ್ ಒಳಗೆ ಹೋಗುವನು ]

**ಧರೋಡೆಸಿಂಗ್** - ಕಾಂಚನ, ವಿಶ್ವಚಂದ್ರ ನೀವಿಬ್ಬರು ಈಕಡೆ ಬನ್ನಿ. [ ಕಾಂಚನ ವಿಶ್ವಚಂದ್ರ ಒಂದು ಕಡೆ ಬಂದು ನಿಲ್ಲುವ , ಪ್ರತಾಪ್‌ಸಿಂಗ್ ಉಮಾ - ಸುಧಾರನ್ನು ಹೊತ್ತುಕೊಂಡು ಬರುವನು. ಬಂದು ರವಿಚಂದ್ರನ ಮುಂದೆ ನಿಲ್ಲಿಸುವನು ]

**ರವಿಚಂದ್ರ** – ಉಮಾ – ಸುಧಾ, ಉಮಾ – ಸುಧಾ [ ಎಂದು ಅಪ್ಪಿಕೊಳ್ಳುವನು ]

**ವಿಶ್ವಚಂದ್ರ** – ಇದು ಮೋಸ! ಮೋಸ!!

**ಪ್ರತಾಪ್‌ಸಿಂಗ್** – ಏ ವಿಶ್ವಚಂದ್ರ, ಹೌದು ಇದು ಮೋಸ, ನೀವಿಬ್ಬರೂ ಒಂದಾಗಿ ಮಾಡಿದ್ದು ಹೈಕ್ಲಾಸ್ ಮೋಸ! [ ಅಷ್ಟರಲ್ಲಿ ವಿಶ್ವಚಂದ್ರ ಓಡಿಹೋಗಲು ಪ್ರಯತ್ನಿಸುವನು ] ವಿಶ್ವಚಂದ್ರ! ಒಂದು ಹೆಜ್ಜೆ ಮುಂದೆ ಇಟ್ಟರೆ ಬೂಟಿನ ಏಟು ಬೀಳುವುದು. ನಮ್ಮನ್ನು ಯಾರೆಂದು ತಿಳಿದುಕೊಂಡಿರುವಿ. ನಾನು C. I. D. ಇನ್‌ಸ್ಪೆಕ್ಟರ್ ಮಧುಚಂದ್ರ ಅಂತ! ನಿನ್ನ ಹೇಸಿ ಕೃತ್ಯವನ್ನು ಕಂಡು ಹಿಡಿಯುವುದಕ್ಕಾಗಿ ನಾನು ಈ ವೇಶವನ್ನು ಧರಿಸಿದ್ದೇನೆ. ನಿಮ್ಮಂತವರಿಗಾಗಿ ನಮ್ಮ ಡಿಪಾರ್ಟ್‌ಮೆಂಟ್ ಧ್ವಜ ಏರಿಸಿ ನಿಂತಿದೆ ಎಂಬುದನ್ನು ಎಂದಿಗೂ ಮರೆಯಬೇಡ. ಏ ಪೋಲೀಸ್,

**ಪೋಲೀಸ್** – [ಒಳಗಿನಿಂದ ಬಂದು] ಎಸ್ ಸಾರ್.

**ಪ್ರತಾಪ್‌ಸಿಂಗ್** – ಮೊದಲು ಇವರಿಬ್ಬರನ್ನು ಅರೆಸ್ಟು ಮಾಡಿಕೊಂಡು ಪೋಲೀಸ್‌ಸ್ಟೇಷನ್ ಕರೆದುಕೊಂಡು ನಡೆ.

**ಪೋಲೀಸ್** – [ ಕೈಗೆ ಬೇಡಿ ಹಾಕುತ್ತಾ ] ಏ ಬಾರೋ ಬದ್ಮಾಸ್ ನನಮಗನೆ ನಿನ್ನ ಸಲುವಾಗಿ ನಾವು 6 ತಿಂಗಳು ನಿದ್ದೆ ಮಾಡಿಲ್ಲ. ಕತ್ತಿಗೆ ಒದ್ದಂಗ ಒದಿತಿನಿ ಬಾ ಮಗನ. [ ವಿಶ್ವಚಂದ್ರ ಕಾಂಚನ ಇವರನ್ನು ಎಳೆದುಕೊಂಡು ಹೋಗುವರು ]

**ಮಧುಚಂದ್ರ** – ರವಿಚಂದ್ರ ಈಗ ನಿನ್ನಹುಚ್ಚು ನಿಚ್ಚಳವಾಯಿತೆ?

**ರವಿಚಂದ್ರ** – [ಇನ್‌ಸ್ಪೆಕ್ಟರ್ ಕಾಲ ಹಿಡಿದು] ಸಾಹೇಬ್ರೆ ಈ ನಿಮ್ಮ ಋಣವನ್ನು ನಾನು ಯಾವ ರೀತಿಯಿಂದ ತೀರಿಸಬೇಕು.

**ಮಧುಚಂದ್ರ** – ಮೇಲಕ್ಕೆ ಏಳು ರವಿ. ಈಗಿನ ಕಾಲದಲ್ಲಿ ಯಾರನ್ನು ನಂಬುವಂತಿಲ್ಲ. ನೀನು ಆ ವಿಶ್ವಚಂದ್ರನನ್ನು ನಿನ್ನ ತಮ್ಮನಂತೆ ಭಾವಿಸಿದ್ದಿ ನೋಡಿದಿಯಾ ಅವನ ನೀಚತನವನ್ನು. ವಿಶ್ವಚಂದ್ರನು ಕಡಿಮೆಯೆಂದು ತಿಳಿದುಕೊಳ್ಳಬೇಡ. ಅವನು ಈಗಾಗಲೇ ಸಾಕಷ್ಟು ಕೊಲೆಗಳನ್ನು ಮಾಡಿಸಿದ್ದಾನೆ, ಅವನನ್ನು ಹಿಡಿಯುವುದು ಯಾರಿಂದಲೂ ಸಾಧ್ಯವಾಗಿರಲಿಲ್ಲ. ಅದಕ್ಕಾಗಿ ಈ ವೇಶವನ್ನು ಹಾಕಿಕೊಂಡು ಅವನೆದುರು ಧರೋಡೆಕೋರರಂತೆ ನಟನೆ ಮಾಡಿದೆವು. ನಾವು ಹಾಗೆ ನಟನೆ ಮಾಡದಿದ್ದರೆ ಇವನು ನಮ್ಮ ಕೈಗೆ ಸಿಗುತ್ತಿರಲಿಲ್ಲ.

[ಅಷ್ಟರಲ್ಲಿ ಸೂರ್ಯಚಂದ್ರ, ಅರ್ಚನ ಬರುವರು, ಅವರಿಬ್ಬರೂ ಇನ್‌ಸ್ಪೆಕ್ಟರ ಕಾಲು ಹಿಡಿದು]

**ಅರ್ಚನ** – ಸಾಹೇಬ್ರ ಈ ಉಪಕಾರವನ್ನು ನಾವು ಎಂದೆಂದಿಗೂ ಮರೆಯುವುದಿಲ್ಲ. ಏಕೆಂದರೆ ನಿಮ್ಮ ಉಪಾಯದಿಂದ ಈ ಮಕ್ಕಳನ್ನು ಉಳಿಸಿದಿರಿ. ನನ್ನ ಗಂಡನನ್ನು ಉಳಿಸಿದಿರಿ. ಈ ಡಾಕ್ಟರ್‌ರನ್ನು ಉಳಿಸಿದಿರಿ ನಿಮ್ಮಂತ ಸಾಮರ್ಥ್ಯವುಳ್ಳವರು ಎಲ್ಲರೂ ಆದರೆ ಸರ್ಕಾರ ದೇವಾಲಯ ಆಗುತ್ತದೆ ನೋಡಿ.

**ಪ್ರತಾಪ್‌ಸಿಂಗ್** – ಇರಲಿ ಬಿಡಮ್ಮಾ ನೀನೇಕೆ ಅಷ್ಟು ಹೊಗಳುವಿ ನೀನು ಸೂಳೆಯಾಗಿದ್ದರೂ ಸ್ವೇಚ್ಛೆಯಿಂದ ಬಾಳುತ್ತೀರಿ. ಅದೇ ನಮಗೆ ಸಂತೋಷ.

**ರವಿಚಂದ್ರ** – ಸತ್ಯವಿದೆ … ಹೇಬ್ರ ನಿಮ್ಮ ಮಾತು. ಗರತಿ ಆಗಿ… …ರ್ಚನ ಸೂಳೆಯಾಗಿದ್ದರೂ ಗರತಿಯಾ… …ಾರು ಸೂಳೆ? ಯಾರು ಸೂಳೆ?

…ಕ್ತಾಯ—



ಎಸ್. ಶೇಷಾದ್ರಿ (ಚಿಂತ್ರಪಳ್ಳಿ)

ನಮ್ಮ ಭಾಗದ ನಾಟಕ ರಂಗದಲ್ಲಿ ಮರೆಯಲಾರದ ಹೆಸರು ಎಸ್. ಶೇಷಾದ್ರಿ. ಹಿರಿಯರಲ್ಲಿ ಹಿರಿಯರಾಗಿ, ಕಿರಿಯರಲ್ಲಿ ಕಿರಿಯರಾಗಿ ತಮ್ಮ ಅಪ್ರತಿಮ ಕಲಾವಂತಿಕೆಯಿಂದ ಎಲ್ಲರ ಅಭಿಮಾನದ ಸಂಗೀತ ಮಾಸ್ತರಾಗಿ ಅನೇಕರ ಪ್ರೀತಿಗೆ ಪಾತ್ರರಾಗಿರುವ ಇವರು ತಮ್ಮ ಎಲ್ಲ ಚಟುವಟಿಕೆಗಳಿಗೂ ಗದುಗಿನ ಅಜ್ಜನವರ ಆಶೀರ್ವಾದ, ತಾಯಿ, ಸಹೋದರರು ಹಾಗೂ ಎಲ್ಲ ಅಭಿಮಾನಿ ಮಿತ್ರರ ಪ್ರೋತ್ಸಾಹವೇ ಕಾರಣ ಎನ್ನುತ್ತಾರೆ,

ಇವರು ಬರೆದ ಮೊದಲ ನಾಟಕ **"ಕಲಿಯುಗದ ಕೃಷ್ಣ"** ಅಪಾರ ಮೆಚ್ಚುಗೆ ಗಳಿಸಿತು. ಈಗ ಪ್ರಕಟಗೊಂಡಿರುವ **"ಸೂಳೆಯಾರು"** ಇವರ ದ್ವಿತೀಯ ನಾಟಕವಾದರೂ ಅಚ್ಚಾಗಿರುವ ಮೊದಲ ಕೃತಿ. ಪ್ರಸ್ತುತ ಸಮಾಜದ ಸ್ಥಿತಿ-ಗತಿಗಳನ್ನು ಜನರ ಮುಂದೆ ಇಟ್ಟಿರುವ ಇವರ ಪ್ರಯತ್ನ ಪ್ರಶಂಸನೀಯ.

ಕಲಾಭಿಮಾನಿಗಳು ಇವರ ನಾಟಕವನ್ನು ಓದಿ, ಅಭಿನಯಿಸಿ, ಪ್ರೋತ್ಸಾಹಿಸಿ, ಶೇಷಾದ್ರಿಯವರು ಮುಂದೆ ಅನೇಕ ಕೃತಿಗಳನ್ನು ರಚಿಸಿ ಕರ್ನಾಟಕದಲ್ಲಿ ಕೀರ್ತಿಗಳಿಸಲಿ ಎಂಬುದೇ ನನ್ನ ಹಾರೈಕೆ.

ತಮ್ಮ

**ಪಿ. ಗೋವಿಂದ್,** ಬಿ.ಎ.,ಬಿ.ಇಡಿ.,

ಹಗರಿಬೊಮ್ಮನಹಳ್ಳಿ.